



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 47

| ಸಂಪುಟ: ೦೫ ಸಂಚಿಕೆ: ೯ | ಡಿಸೆಂಬರ್ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 05 Issue 9 | December 2018 | Pages - 8 | A. Sub. - Rs. 20/- | Editor : Sri. B.R. Ravindranath |

ದಿ॥ ಪ್ರೊ ಎಂ.ವಿ. ಸೀತಾರಾಮಯ್ಯ
ಸಂಸ್ಥಾಪಕರು

ಪ್ರೊ. ಎಂ. ಎಚ್. ಕೃಷ್ಣಯ್ಯ
ಗೌರವಾಧ್ಯಕ್ಷರು
ಮೊ : ೯೪೫೬೫೮೮೮೫

**ಪದಾಧಿಕಾರಿಗಳು**

ಅಧ್ಯಕ್ಷರು
ಡಾ. ಆರ್. ಲಕ್ಷ್ಮೀ ನಾರಾಯಣ
ಮೊ : ೯೪೪೯೦೨೪೯೯೬

ಗೌ॥ ಕಾರ್ಯದರ್ಶಿಗಳು :
ಡಾ. ವಿಜಯಾ ಸುಬ್ಬರಾಜ್
ಮೊ : ೯೮೮೬೨೮೮೭೬

ಶ್ರೀ ಬಿ. ಆರ್. ರವೀಂದ್ರನಾಥ್
ಮೊ : ೯೪೪೮೩೬೬೮೪೯

ಕೋಶಾಧ್ಯಕ್ಷರು
ಡಾ॥ ಎಸ್. ಅನಿಲ್ ಕುಮಾರ್
ಮೊ : ೯೬೪೪೬೪೯೫೬

ಹಸ್ತಪ್ರತಿ ವಿಭಾಗದ
ಸಂಯೋಜನಾಧಿಕಾರಿ
ಶ್ರೀ ಬಿ.ಎಸ್. ಗುರುಪ್ರಸಾದ್ – ಹಸ್ತಪ್ರತಿ ವಿಭಾಗ
ಮೊ : ೯೫೩೬೦೯೭೩೩೭

**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ

ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ




ಕೇಂದ್ರ ರಾಸಾಯನಿಕ ಹಾಗೂ ಗೊಬ್ಬರ ಖಾತೆ
ಮತ್ತು ಸಂಸದೀಯ ವ್ಯವಹಾರಗಳ ಸಚಿವರಾದ

**ಶ್ರೀ ಅನಂತ್ ಕುಮಾರ್**

ಅವರಿಗೆ ಬಿ.ಎಂ.ಶ್ರೀ ಪ್ರತಿಷ್ಠಾನ ವು
ಭಾವಪೂರ್ಣ ಶ್ರದ್ಧಾಂಜಲಿ ಅರ್ಪಿಸುತ್ತದೆ.

೨೦೦೦ ಹಾಗೂ ೨೦೦೩ ಇಸವಿಯಲ್ಲಿ ಮಾನ್ಯ ಶ್ರೀ ಅನಂತಕುಮಾರ್ ಅವರು ಸಂಸದರ ನಿಧಿಯಿಂದ ಬಿ.ಎಂ.ಶ್ರೀ ಕಲಾ ಭವನದ ಕಟ್ಟಡ ನಿರ್ಮಾಣಕ್ಕಾಗಿ ಒಟ್ಟು ೧೦ ಲಕ್ಷ ರೂ.ಗಳ ಕಾಮಗಾರಿ ಅನುದಾನ ನೀಡಿರುವುದನ್ನು ಬಿ.ಎಂ.ಶ್ರೀ ಪ್ರತಿಷ್ಠಾನವು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಿದೆ.

## ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಪ್ರದಾನ ಸಮಾರಂಭ

೧೧–೧೧–೨೦೧೮ರ ಭಾನುವಾರ ಬೆಳಿಗ್ಗೆ ೧೦–೩೦ಕ್ಕೆ ಬಿ.ಎಂ.ಶ್ರೀ ಅವರ ಮೊಮ್ಮಗಳು ಶ್ರೀಮತಿ ಕಮಲಿನಿ ಬಾಲೂರಾವ್ ಅವರು ಶಾ. ಬಾಲೂರಾವ್ ಹೆಸರಿನಲ್ಲಿ ಸ್ಥಾಪಿಸಿರುವ ಶಾ.ಬಾಲೂರಾವ್ ಯುವಬರಹಗಾರ ಪುರಸ್ಕಾರ ಮತ್ತು ಶಾ. ಬಾಲೂರಾವ್ ಅನುವಾದ ಪುರಸ್ಕಾರ ಸಮಾರಂಭ ನಡೆಯಿತು.ಸಮಾರಂಭದ ಅಧ್ಯಕ್ಷತೆಯನ್ನು ಖ್ಯಾತ ಸಾಹಿತಿ ಮತ್ತು ರಂಗ ನಿರ್ದೇಶಕ ಡಾ.ನಾ. ದಾಮೋದರ ಶೆಟ್ಟಿಯವರು ವಹಿಸಿದ್ದರು.

ಡಾ. ಎಸ್. ರಮಾದೇವಿ ವಿಶ್ವೇಶ್ವರಯ್ಯನವರ "ಕರುಣಾಳು ಬಾ ಬೆಳಕೆ" ಸುಶ್ರಾವ್ಯವಾದ ಗಾಯನದ ನಂತರ ರವೀಂದ್ರನಾಥ್ ಅವರು ಎಲ್ಲರನ್ನೂ ಸ್ವಾಗತಿಸಿ ಅತಿಥಿಗಳನ್ನು ಪರಿಚಯಿಸಿದರು.

ಡಾ.ಲಕ್ಷ್ಮೀನಾರಾಯಣ ಅವರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಶಾ. ಬಾಲೂರಾವ್ ಅವರು ಸ್ವತಃ ಶ್ರೇಷ್ಠ ಅನುವಾದಕರಾಗಿದ್ದು ಚೀನಿ ಮತ್ತು ರಷ್ಯನ್ ಭಾಷೆಯಿಂದ ನೇರವಾಗಿ ಅನುವಾದಿಸುತ್ತಿದ್ದರು. ಅವರ 'ಸೂರ್ಯ ಇವನೊಬ್ಬನೇ' ಕವನ ಸಂಕಲನ ಸೂರ್ಯನನ್ನು ಕುರಿತ ವಿಶಿಷ್ಟ ರಚನೆ. ರಸದ ಗುಂಡುಗಳನ್ನು ಉರುಳಿಸುವಂತೆ ಭಾಷೆ ಬಳಸುವ ಅದರ ಶೈಲಿ ಅತ್ಯಾಕರ್ಷಕ. ಅವರ "ಷೇಕ್ಸ್ ಪಿಯರ್‌ಗೆ ನಮಸ್ಕಾರ" ಒಂದು ಅದ್ಭುತ ಸಂಪಾದಿತ ಕೃತಿ. ಇಂಥವರ ನೆನಪಿನಲ್ಲಿ ಎರಡು ಪ್ರಶಸ್ತಿಗಳನ್ನು ಸ್ಥಾಪಿಸಿರುವುದು ಸಂತಸದ ಸಂಗತಿ. ಶ್ರೀಮತಿ ಕಮಲಿನಿ ಅವರು ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ 'ಪ್ರಾಣಂಬರ್ಪಾಕೃತಿಯೊಳ್' ಬಂದರು. ಅವರ ಅಪಾರ ಕೊಡುಗೆಯನ್ನು ಮತ್ತೆ ಮತ್ತೆ ನೆನೆಯಬೇಕೆನಿಸುತ್ತದೆ. ಡಾ. ದಾಮೋದರಶೆಟ್ಟಿಯವರು ಅನುವಾದ ಸಾಹಿತ್ಯಕ್ಕೆ ವಿಪುಲಕೊಡುಗೆ ನೀಡಿದ್ದಾರೆ ಎಂದು ಹೇಳಿ ಎಲ್ಲರನ್ನೂ ಮತ್ತೊಮ್ಮೆ ಸ್ವಾಗತಿಸಿದರು.

ಶ್ರೀ ಶ್ರೀಧರ ಅವರು ಈ ಕಾದಂಬರಿಯನ್ನು ಬರೆಯಲು ತಪಸ್ಸಿನಲ್ಲಿ ತೊಡಗಿದ್ದಂತೆ ತಮ್ಮನ್ನು ತಾವು ತೊಡಗಿಸಿಕೊಂಡ ಬಗೆಯನ್ನು ವಿವರಿಸಿದರು. ಪ್ರೊ. ನೃಪಥಂ ಎಸ್ಸೆ ಅವರು ಅನುವಾದ ಪ್ರಶಸ್ತಿಗೆ ಆಯ್ಕೆಯಾದ "ಸಿದ್ಧಾರ್ಥ" ಕೃತಿಯನ್ನು ಬರೆಯಲು ತಮಗೆ ಪ್ರೇರಣೆ ನೀಡಿದ ಅಂಶಗಳನ್ನು ಎಲ್ಲರೊಂದಿಗೆ ಹಂಚಿಕೊಂಡರು. ೪ನೇ ಪುಟಕ್ಕೆ

## ಸಂಪಾದಕೀಯ

ಕನ್ನಡ ಭಾಷೆಗೆ ಸಂಬಂಧಿಸಿದಂತೆ ಸಾವಿರಾರು ಪ್ರಶಸ್ತಿಗಳನ್ನು ವಿಶ್ವಾದ್ಯಂತ ಸ್ಥಾಪಿಸಲಾಗಿರುತ್ತದೆ. ಲಕ್ಷಾಂತರ ರೂಗಳ ಮೌಲ್ಯದ ಬಹು ಪ್ರತಿಷ್ಠಿತ ಪ್ರಶಸ್ತಿಗಳಿಂದ ಹಿಡಿದು ಕೆಲವೇ ಸಾವಿರ ರೂಗಳ ಮೌಲ್ಯದ ಪ್ರಶಸ್ತಿಗಳನ್ನು ಪ್ರತಿವರ್ಷ ನೀಡಲಾಗುತ್ತಿದೆ. ಪ್ರಕಟಿತ ಪುಸ್ತಕಗಳಿಗೆ ಸಾಹಿತ್ಯ ಪ್ರಶಸ್ತಿಗಳನ್ನು ಅನೂಚಾನವಾಗಿ ನೀಡಲಾಗುತ್ತಿದೆಯಾದರೂ ಪ್ರಶಸ್ತಿಗಾಗಿ ಆಯ್ಕೆ ಮಾಡುವ ಪ್ರಕ್ರಿಯೆಗಳ ಗುಣಮಟ್ಟದಲ್ಲಿ ಸುಧಾರಣೆಗಳಾಗುತ್ತಿಲ್ಲ ಎಂದುಕಂಡು ಬರುತ್ತಿದೆ. ಅರ್ಹರಿಗೆ ಪ್ರಶಸ್ತಿಗಳನ್ನು ತಲುಪಿಸುವಲಿ ಅರ್ಹ ಪುಸ್ತಕಗಳನ್ನು ಆಯ್ಕೆ ಮಾಡಲು ರಚಿಸಲಾಗುವ ಆಯ್ಕೆ ಸಮಿತಿಯ ಸದಸ್ಯರ ಮೇಲೆ ಬಹು ದೊಡ್ಡ ಜವಾಬ್ದಾರಿ ಇರುತ್ತದೆ. ಆಯ್ಕೆ ಸಮಿತಿಯನ್ನು ರಚಿಸುವವರ ಮೇಲೆ ಇನ್ನೂ ಹೆಚ್ಚಿನ ಜವಾಬ್ದಾರಿ ಇರುವುದು ನಿಶ್ಚಿತ.

ಆದರೆ ಹಲವಾರು ಕಾರಣಗಳ ದೆಸೆಯಿಂದ ಕೆಲವು ಬಾರಿ ಆಯ್ಕೆ ಸಮಿತಿ ಸದಸ್ಯರ ಗುಣಮಟ್ಟ ಹಾಗೂ ಆಯ್ಕೆ ನಿರ್ಧಾರಗಳ ಬಗ್ಗೆ ಸಂದೇಹ ಉಂಟಾಗುತ್ತದೆ. ಬಹುತೇಕವಾಗಿ, ಆಯ್ಕೆ ಸಮಿತಿಗಳಿಗೆ ನೇಮಕವಾಗುವ ಮಟ್ಟ ತಲುಪಿರುವ ವಿಮರ್ಶಕರು ಸ್ವಾಭಾವಿಕವಾಗಿ ಹಲವಾರು ಇತರ ಕೆಲಸಗಳಲ್ಲಿ ತಲ್ಲೀನರಾಗಿದ್ದು ಪ್ರಶಸ್ತಿಗೆ ಅರ್ಹವಾಗಿರುವ ಪುಸ್ತಕಗಳನ್ನು ಆಯ್ಕೆ ಮಾಡುವಲ್ಲಿ ಅಗತ್ಯ ಮಟ್ಟದ ಕಾಳಜಿ ವಹಿಸುತ್ತಿಲ್ಲದಿರಬಹುದು ಎಂಬ ಸಂದೇಹ ಮೂಡುತ್ತದೆ. ಇದರ ಜೊತೆಗೆ ಎಲ್ಲಾ ಮಟ್ಟಗಳಲ್ಲೂ, ಎಲ್ಲಾ ಕ್ಷೇತ್ರಗಳಲ್ಲೂ ಕಾಣಬರುವ ರಾಗ ದ್ವೇಷಗಳೂ ಅರ್ಹರನ್ನು ಆಯ್ಕೆ ಮಾಡುವ ಪ್ರಕ್ರಿಯೆಗಳಲ್ಲಿ ಬಹು ದೊಡ್ಡ ಪಾತ್ರ ವಹಿಸುತ್ತವೆ ಎಂಬ ನಂಬಿಕೆ ಮೂಡುತ್ತದೆ. ಬಹಳಷ್ಟು ಸಂಸ್ಥೆಗಳ ಪದಾಧಿಕಾರಿಗಳು ಆಯ್ಕೆ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳದೇ ಪ್ರಶಸ್ತಿಗೆ ಅರ್ಹವಾದ ಪುಸ್ತಕವನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿ ಸದಸ್ಯರಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿದ್ದರೂ ಆಯ್ಕೆ ಮಾಡುವಲ್ಲಿ ಪದಾಧಿಕಾರಿಗಳು ತಮ್ಮ ಪ್ರಭಾವ ಬೀರಿರಬಹುದು ಎಂದು ಕೆಲವರು ನಂಬುತ್ತಾರೆ. ಕೆಲವು ಬಾರಿ ಆಯ್ಕೆಗೊಂಡಿರುವ ಪುಸ್ತಕಗಳಲ್ಲಿಯೂ ಹಲವಾರು ರೀತಿಯ ಕೊರತೆಗಳು ಕಂಡು ಬಂದಿರುತ್ತವೆ. ಹೀಗಾಗಿ ಪ್ರಶಸ್ತಿಗಳು ಮೌಲ್ಯ ಕಳೆದುಕೊಳ್ಳುವ ಸಾಧ್ಯತೆಗಳು ಕಂಡು ಬರುತ್ತಿವೆ.

ಇಂತಹ ನ್ಯೂನತೆಗಳನ್ನು ಹೋಗಲಾಡಿಸಲು ಸಮಗ್ರವಾಗಿ ಚಿಂತನೆ ನಡೆಸಬೇಕಾಗಿದೆ. ಪ್ರಕಟಿತ/ಅಪ್ರಕಟಿತ ಪುಸ್ತಕಗಳ ಮೌಲ್ಯೀಕರಣ ಮಾಡುವ ಒಂದು ಪ್ರತ್ಯೇಕ ಸ್ವಾಯತ್ತ ವ್ಯವಸ್ಥೆ/ಸಂಸ್ಥೆ ಅಸ್ತಿತ್ವದಲ್ಲಿ ಬರಬೇಕಾಗಿದೆ. ಇಂತಹ ಒಂದು ವ್ಯವಸ್ಥೆಯನ್ನು ಸ್ಥಾಪಿಸಿದಲ್ಲಿ ಪುಸ್ತಕಗಳ ಮೌಲ್ಯೀಕರಣದ ಪ್ರಕ್ರಿಯೆಗಳು ಸದೃಢಗೊಂಡು ಬಲವಾದ ಮಾನದಂಡಗಳನ್ನು ರೂಪಿಸಿ ಅನುಸರಿಸಲು ಸುಲಭವಾಗುತ್ತದೆ. ಇಂತಹ ವ್ಯವಸ್ಥೆಯು ನುರಿತ ವಿಮರ್ಶಕರ ಸೇವೆಯನ್ನು ಪಡೆದು ಪುಸ್ತಕಗಳನ್ನು ಹಲವಾರು ಮಾನದಂಡಗಳಿಗೆ ಅನುಗುಣವಾಗಿ ಶ್ರೇಣೀಕರಿಸಿದಲ್ಲಿ ಪ್ರಶಸ್ತಿ ನೀಡಲು ಬಯಸುವ ಸಂಸ್ಥೆಗಳಿಗೆ ಹೆಚ್ಚು ಅನುಕೂಲ ಹಾಗೂ ಅರ್ಹರನ್ನು ಗುರುತಿಸಲು ಒಂದು ಪಾರದರ್ಶಕ ವ್ಯವಸ್ಥೆ ಸ್ಥಾಪಿತಗೊಂಡು ಅರ್ಹರಿಗೆ ಸೂಕ್ತ ಪ್ರಶಸ್ತಿಗಳನ್ನು ನೀಡಲು ಸಹಾಯಕವಾಗಬಹುದಾಗಿರುತ್ತದೆ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

### ಡಿಸೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ವ್ಯಾಸರಾಯ ಬಲ್ಲಾಳ | ೧-೧೨-೧೯೨೩ |
| ಜಿ.ಪಿ.ರಾಜರತ್ನಂ | ೫-೧೨-೧೯೦೪ |
| ಶಾಂತಾದೇವಿ ಮಾಳವಾಡ | ೧೦-೧೨-೧೯೨೨ |
| ಜಯಲಕ್ಷ್ಮಿ ಶ್ರೀನಿವಾಸನ್ | ೧೨-೧೨-೧೯೧೧ |
| ಯು ಆರ್. ಅನಂತಮೂರ್ತಿ | ೨೧-೧೨-೧೯೩೨ |
| ಎಸ್.ವಿ. ರಂಗಣ್ಣ | ೨೪-೧೨-೧೮೯೮ |
| ಎಸ್.ವಿ. ಶ್ರೀನಿವಾಸ ರಾವ್ | ೨೪-೧೨-೨೦೧೮ |
| ದೇವುಡು | ೨೯-೧೨-೧೮೯೬ |
| ಕುವೆಂಪು | ೨೯-೧೨-೧೯೦೪ |
| ಕಾಕೋಳು ಸರೋಜಾರಾವ್ | ೩೧-೧೨-೧೯೪೨ |

### ಡಿಸೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ವಾಣಿ(ಸುಬ್ಬಮ್ಮ) | ೦೧-೧೨-೧೯೮೮ |
| ಆರ್. ನರಸಿಂಹಚಾರ್ | ೦೬-೧೨-೧೯೩೬ |
| ಶೈಲಜಾ ಉಡಚಣ | ೦೬-೧೨-೨೦೦೦ |
| ಶಿವರಾಮ ಕಾರಂತ | ೯-೧೨-೧೯೯೭ |
| ಹೆಚ್. ವಿ. ಸಾವಿತ್ರಮ್ಮ | ೧೭-೧೨-೧೯೯೫ |
| ಫರ್ಡಿನಾಂಡ್ ಕಿಟಲ್ | ೧೯-೧೨-೧೯೦೩ |
| ಶಿಶಿ ಬಸವನಾಳ | ೨೨-೧೨-೧೯೫೧ |
| ಮಿರ್ಜಿಅಣ್ಣಾರಾಯ | ೨೩-೧೨-೧೯೭೫ |
| ಜಿ.ಬಿ. ಜೋಶಿ | ೨೫-೧೨-೧೯೯೩ |

### ಪ್ರಕಟಣೆ

## ೨೦೧೭ನೇ ಸಾಲಿನ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಪ್ರಶಸ್ತಿ

ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಶ್ರೀ ಎಸ್.ವಿ.ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ದಿ॥ ಸಾರಂಗಿ ವೆಂಕಟರಾಮಯ್ಯ-ಪುಟ್ಟಚ್ಚಮ್ಮ ದತ್ತಿ ನಿಧಿ ಪ್ರಶಸ್ತಿಯಡಿ ೨೦೧೭ನೇ ಸಾಲಿನ ದತ್ತಿ ಪ್ರಶಸ್ತಿಗೆ ೨೦೧೭ನೇ ಸಾಲಿನಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟಗೊಂಡಿರುವ ಕಾದಂಬರಿಯನ್ನು ಆಹ್ವಾನಿಸಲಾಗಿದೆ. ಕಾದಂಬರಿಯ ೨ ಪ್ರತಿಗಳನ್ನು ತಲುಪಿಸುವ ಕೊನೆಯ ದಿನಾಂಕವನ್ನು ೧೦-೧೨-೨೦೧೮ರ ವರೆಗೆ ವಿಸ್ತರಿಸಲಾಗಿದೆ. ಪ್ರತಿಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಲು ಕೋರಿದೆ. ಪ್ರಶಸ್ತಿಯ ಮೊತ್ತ ೩,೦೦೦/- ರೂಗಳು ಹಾಗೂ ಪ್ರಶಸ್ತಿ ಪತ್ರವನ್ನು ವಿಶೇಷ ಸಮಾರಂಭದಲ್ಲಿ ವಿತರಿಸಲಾಗುವುದು.

## ದೇವುಡು ನರಸಿಂಹಶಾಸ್ತ್ರಿ ೧೮೯೬-೧೯೬೨



ಸಾಹಿತಿ, ಶ್ರೇಷ್ಠ ವಿದ್ವಾಂಸ, ಪತ್ರಿಕಾ ಸಂಪಾದಕ ಹೀಗೆ ಬಹುಮುಖ ಪ್ರತಿಭೆಯ ದೇವುಡು ನರಸಿಂಹಶಾಸ್ತ್ರಿ ೧೮೯೬ರ ಡಿಸೆಂಬರ್ ೨೯ರಂದು ವೇದ ವಿದ್ವಾಂಸರ ಮನೆತನದಲ್ಲಿ ಜನಿಸಿದವರು. ಖ್ಯಾತ ತತ್ವಶಾಸ್ತ್ರಜ್ಞ ಡಾ.ಸರ್ವಪಲ್ಲಿ ರಾಧಾಕೃಷ್ಣನ್ ಅವರಲ್ಲಿ ತತ್ವಸಾಸ್ತ್ರ, ಮತ್ತು ಪ್ರೊ. ಎಂ. ಹಿರಿಯಣ್ಣನವರಲ್ಲಿ ಸಂಸ್ಕೃತವನ್ನು ಅಭ್ಯಾಸ ಮಾಡಿ ಸಂಸ್ಕೃತ ಎಂ.ಎ.ಪದವಿ ಪೂರೈಸಿದರು. ೧೨ನೇ ವಯಸ್ಸಿಗೆಲ್ಲಾ ರಾಮಾಯಣ, ಭಾರತ, ಭಾಗವತಗಳನ್ನು ಓದಿ ಮುಗಿಸಿದರು. ಮೊದಲಿಗೆ ಮೈಸೂರಿನ ಸದ್ವಿದ್ಯಾಶಾಲೆಯ ಮುಖ್ಯೋಪಾಧ್ಯಾಯರಾಗಿ ವೃತ್ತಿ ಜೀವನ ಆರಂಭಿಸಿ ಅನಂತರ ಬೆಂಗಳೂರಿಗೆ ತಮ್ಮ ಕಾರ್ಯಕ್ಷೇತ್ರವನ್ನು ಬದಲಿಸಿಕೊಂಡರು. ಆರ್ಯ ವಿದ್ಯಾಶಾಲೆಯನ್ನು ಸ್ಥಾಪಿಸಿ ಅಲ್ಲಿ ದುಡಿದರು. ಮಕ್ಕಳ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡು 'ಮಕ್ಕಳ ಪುಸ್ತಕ' ಪ್ರಕಟಿಸಿದರು.'ನವಜೀವನ ಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು. ಒಂದು ಹವ್ಯಾಸಿ ನಾಟಕ ಕಂಪನಿಯ ಸದಸ್ಯರಾಗಿ ನಾಟಕಗಳಲ್ಲಿ ನಟಿಸಲು ಆರಂಭಿಸಿ ಮುಂದೆ ಈ ಅನುಭವದ ಆಧಾರದ ಮೇಲೆ ಚಲನ ಚಿತ್ರ ಕ್ಷೇತ್ರಕ್ಕೂ ಪದಾರ್ಪಣೆ ಮಾಡಿ 'ಧ್ರುವ ಕುಮಾರ' 'ಚಿರಂಜೀವಿ' ಚಿತ್ರಗಳನ್ನು ಹೊಸ ತಂತ್ರ ಅಳವಡಿಸಿ ನಿರ್ಮಿಸಿದರು. ಶಾಸ್ತ್ರ ವಿಷಯಗಳಿಂದ ಹಿಡಿದು ಸಾಮಾಜಿಕ ವಿಷಯಗಳವರೆಗೆ ತಮ್ಮ ಬರವಣಿಗೆಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದ್ದ ದೇವುಡು ಮಹಾ ಬ್ರಾಹ್ಮಣ, ಮಹಾ ಕ್ಷತ್ರಿಯ, ಮಹಾ ದರ್ಶನ,ಮೊದಲಾದ ತಮ್ಮ ಶ್ರೇಷ್ಠ ಕಾದಂಬರಿಗಳಿಂದಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಅಚ್ಚಳಿಯದ ಪ್ರಭಾವ ಮುದ್ರೆಯನ್ನು ಅಂಕಿಸಿದ್ದಾರೆ. ಅವರ 'ಮಹಾ ಕ್ಷತ್ರಿಯ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಿದೆ. ತಮ್ಮ ಅಪಾರವಾದ ವೇದೋಪನಿಷತ್ತುಗಳ ಪಾಂಡಿತ್ಯವನ್ನು ಈ ಕಾದಂಬರಿಗಳ ರಚನೆಗೆ ವಿನಿಯೋಗಿಸಿದ್ದಾರೆ. ಪೌರಾಣಿಕ ಪ್ರಪಂಚದ ಬೆರಗುಗೊಳಿಸುವ ವಿವರಪೂರ್ಣ ವರ್ಣನೆಗಳೊಂದಿಗೆ ಅಪೂರ್ವವಾದ ದರ್ಶನವನ್ನು ಈ ಮೂರೂ ಕಾದಂಬರಿಗಳಲ್ಲಿ ದೇವುಡು ಓದುಗರ ಮುಂದಿಟ್ಟಿದ್ದಾರೆ. ಮಯೂರ, ಅವಳ ಕಥೆ, ಅಂತರಂಗ, ಮಲ್ಲಿ ಅವರು ರಚಿಸಿರುವ ಇತರ ಕಾದಂಬರಿಗಳು. ಇವಲ್ಲದೆ ಯೋಗವಾಸಿಷ್ಠದ ಅನುವಾದ, ಮೀಮಾಂಸ ದರ್ಪಣ, ಸಂಗ್ರಹ ರಾಮಾಯಣ, ಮಹಾಭಾರತದ ಮಹಾಪುರುಷರು, ಕರ್ನಾಟಕ ಸಂಸ್ಕೃತಿ, ಇನ್ನಿತರ ಕೃತಿಗಳನ್ನೂ ರಚಿಸಿದ್ದಾರೆ.

# ಡಿಸೆಂಬರ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ

**೦೬-೧೨-೨೦೧೮ ಗುರುವಾರ ಸಂಜೆ - ೦೬ ಗಂಟೆಗೆ**

"ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಅನುವಾದ - ನೈತಿಕ ಸಮಸ್ಯೆಗಳು

ಚಾಲನೆ : ಶ್ರೀ ಬಿ. ಆರ್.ರವೀಂದ್ರನಾಥ

**೧೨-೧೨-೨೦೧೮ ಬುಧವಾರ ಸಂಜೆ - ೬-೦೦ಗಂಟೆಗೆ**



ಚಿದಾನಂದಯ ದೀಕ್ಷಿತ , ವಿ.ಸೀ, ಶಾಂತಾ ಪ್ರಭುಶಂಕರ, ವೆಂಕಟರಂಗಪ್ಪ, ಟಿ.ಎನ್. ಮಹದೇವಯ್ಯ, ಜಿ.ಪಿ. ರಾಜರತ್ನಂ, ರಾಮಚಂದ್ರ ಪಟವಾರಿ, ಚಂದ್ರ ಶೇಖರ್ ಶರ್ಮ, ಎಸ್. ಶ್ರೀಕಂಠಯ್ಯ ದತ್ತಿಗಳು

ಉಪನ್ಯಾಸ: ಡಾ. ಜಿ. ಅಶ್ವತ್ಥನಾರಾಯಣ

ವಿಷಯ: ದೇವುಡು - ವ್ಯಕ್ತಿ ಮತ್ತು ಬರಹ

**೧೬-೧೨-೨೦೧೮ ಭಾನುವಾರ ಬೆಳಿಗ್ಗೆ - ೧೦-೩೦ ಗಂಟೆಗೆ**

**ಡಾ. ಬಿ.ಜಿ.ಎಲ್. ಸ್ವಾಮಿ - ನೂರರ ನೆನಪು**

ಉಪನ್ಯಾಸ: ಡಾ. ಸುಂದರರಾಜನ್ ನಿವೃತ್ತ ಸಸ್ಯಶಾಸ್ತ್ರ ಪ್ರಾಧ್ಯಾಪಕರು

ವಿಷಯ: ಡಾ. ಬಿ.ಜಿ.ಎಲ್. ಸ್ವಾಮಿ ಅವರ ಸಸ್ಯ ಶಾಸ್ತ್ರೀಯ ಬರಹ ಹಾಗೂ ಸಂಶೋಧನೆ

ಉಪನ್ಯಾಸ : ಡಾ. ಎಸ್. ಎಲ್. ಶ್ರೀನಿವಾಸ ಮೂರ್ತಿ, ನಿವೃತ್ತ ಕನ್ನಡ ಪ್ರಾಧ್ಯಾಪಕರು

ವಿಷಯ: ಡಾ. ಬಿ.ಜಿ.ಎಲ್. ಸ್ವಾಮಿ ಅವರ ವಿಡಂಬನಾತ್ಮಕ ಬರಹಗಳು

ಅಧ್ಯಕ್ಷತೆ: ಶ್ರೀ ಎಸ್. ದಿವಾಕರ್, ಖ್ಯಾತ ಲೇಖಕರು

**೧೯-೧೨-೨೦೧೮ ಬುಧವಾರ ಸಂಜೆ ೪-೦೦ ಗಂಟೆಗೆ**

**ಸಾಹಿತ್ಯ ಸಂಚಲನ - ೬**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ

ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಉಪನ್ಯಾಸ ಡಾ. ವಿಜಯಲಕ್ಷ್ಮಿ ಬಾಳೇಕುಂದ್ರಿ

ಮಕ್ಕಳ ಹೃದ್ರೋಗ ಚಿಕಿತ್ಸಾ ತಜ್ಞೆ

ವಿಷಯ: ಆರೋಗ್ಯಕ್ಕೆ ವಚನ ಸಾಹಿತ್ಯ



**೨೯-೧೨-೨೦೧೮ ಶನಿವಾರ ಸಂಜೆ -೪-೦೦ಗಂಟೆಗೆ**

**ಕುವೆಂಪು ನಮನ**

ಕುವೆಂಪು ಗೀತೆಗಳ ಗಾಯನ ಸ್ಪರ್ಧೆ

### ಡಾ. ಕೆ. ಮರುಳ ಸಿದ್ದಪ್ಪ

ಮೈಸೂರು ವಿಶ್ವವಿದ್ಯಾನಿಲಯದ ಅತ್ಯುನ್ನತ ದರ್ಜೆಯ ಮಾಸ್ಟರ್ಸ್ ಪದವಿ ಗಳಿಸಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ ನೇಮಕಹೊಂದಿದ ಕೆ.ಎಂ.ಎಸ್ ಅವರದು, ಉಪಪ್ರಾಧ್ಯಾಪಕ, ಪ್ರಾಧ್ಯಾಪಕ ಮತ್ತು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಆ ಕ್ಷೇತ್ರದಲ್ಲಿ ಮೂರು ದಶಕಗಳಿಗೂ ಮೀರಿದ ಅವಿಶ್ರಾಂತ ದುಡಿಮೆ. ನಾಟಕ ಕ್ಷೇತ್ರದಲ್ಲಿ ಅಪಾರ ಆಸಕ್ತಿ ತಳೆದ ಕೆ.ಎಂ.ಎಸ್. ಆ ವಿಷಯದಲ್ಲಿ ಮೌಲಿಕ ಸಂಶೋಧನೆ ನಡೆಸಿ ರಚಿಸಿದ "ಆಧುನಿಕ ಕನ್ನಡ ನಾಟಕ" ಮಹಾ ಪ್ರಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯದ ಪಿಎಚ್. ಡಿ ಪದವಿ ಗಳಿಸಿದರು. ಈ ಗ್ರಂಥ ನಾಟಕಗಳ ಅಧ್ಯಯಯನ ಕ್ಷೇತ್ರದಲ್ಲಿ ಕ್ಲಾಸಿಕ್ ಎನ್ನುವಂಥಹ ಅಧ್ಯಯನ. ಸೋಫೋಕ್ಲೀಸನ ಎಲೆಕ್ಟ್ರಾ ಮತ್ತು ಯೂರಿಪಿಡಿಸ್‌ನ ಮಿಡಿಯಾ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಲಂಕೇಶರ ಸಂಕ್ರಾಂತಿ ನಾಟಕ ಕುರಿತ "ಸಂಕ್ರಾಂತಿ-ಒಂದು ಸಾಂಸ್ಕೃತಿಕ ಅಧ್ಯಯನ" ಸೊಗಸಾದ ಅಧ್ಯಯನ. 'ಲಂಕೇಶ್' - ಕೇಂದ್ರ ಸಾಹಿತ್ಯ ಅಕಾಡೆಮಿಯ ಭಾರತೀಯ ಸಾಹಿತ್ಯ ನಿರ್ಮಾಪಕರು ಮಾಲಿಕೆಯಲ್ಲಿ ಅವರು ರಚಿಸಿರುವ ಲಂಕೇಶರ ಬದುಕು ಬರಹ ಕುರಿತ ಉತ್ತಮ ಗ್ರಂಥ. 'ನೋಟ' ಇಂಗ್ಲೆಂಡ್ ಪ್ರವಾಸ ಕುರಿತ ಹೊಸ ರೀತಿಯ ಬರಹ. ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ಅವರು ಮಾಡಿದ ಕಾರ್ಯ ಕೂಡ ಮಹತ್ವದ್ದೇ. ಇದೀಗ ಕುವೆಂಪು ಭಾಷಾಭಾರತಿ ಪ್ರಾಧಿಕಾರದ ಅಧ್ಯಕ್ಷರಾಗಿ ಮಹತ್ವದ ಯೋಜನೆಗಳನ್ನು ಹಮ್ಮಿಕೊಂಡು ನೂರಕ್ಕೂ ಹೆಚ್ಚು ಗ್ರಂಥಗಳ ಪ್ರಕಟಣೆಗೆ ವ್ಯವಸ್ಥೆ ಮಾಡಿದ್ದಾರೆ.

**ಕರ್ನಾಟಕ ಲೇಖಕಿಯರ ಸಂಘ**

**ದಿನಾಂಕ ೨೧-೧೨-೨೦೧೮ ಸಮಯ : ಸಂಜೆ : ೪ ಘಂಟೆ**

**ಸ್ಥಳ : ಬಿ.ಎಂ.ಶ್ರೀ ಪ್ರತಿಷ್ಠಾನ**

ಡಾ|| ಲೀಲಾವತಿ ದೇವದಾಸ್ ದತ್ತಿ ಉಪನ್ಯಾಸ ಕಾರ್ಯಕ್ರಮ

ವಿಷಯ : ಹೆಣ್ಣಿನ ಭಾವನೆಗಳು

ಉಪನ್ಯಾಸ : ಡಾ. ಶಮಂತಕ ಮಣಿ ನರೇಂದ್ರನ್

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## ಸಾಹಿತ್ಯ ಸಂಚಲನ – ೪




ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಮುಖ್ಯ ಅತಿಥಿ : ಶ್ರೀ ಜಯಕುಮಾರ್ ಮರಿಯಪ್ಪ, ನಿವೃತ್ತ ನಿರ್ದೇಶಕರು, ಭಾಷಾಂತರ ಇಲಾಖೆ, ಕರ್ನಾಟಕ ಸರ್ಕಾರ

ಉಪನ್ಯಾಸದ ವಿಷಯ : **'ಜೀವನ್ಮುಖಿ ಭಾಷಾಂತರ'**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಹಮ್ಮಿಕೊಂಡಿದ್ದ ಸಾಹಿತ್ಯ ಸಂಚಲನ ಸರಣಿಯ ನಾಲ್ಕನೇ ಕಾರ್ಯಕ್ರಮಕ್ಕೆ ಆಹ್ವಾನಿತರಾಗಿ ಆಗಮಿಸಿದ್ದ ಮುಖ್ಯ ಅತಿಥಿ ಶ್ರೀ ಜಯಕುಮಾರ್ ಮರಿಯಪ್ಪರವರು, ದಿನಾಂಕ ೨೪. ೧೦. ೨೦೧೮ರಂದು 'ಜೀವನ್ಮುಖಿ ಭಾಷಾಂತರ' ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡಿದರು.

ತಮ್ಮ ಉಪನ್ಯಾಸದ ಪ್ರಾರಂಭದಲ್ಲಿ, ಬಿ.ಎಂ.ಶ್ರೀರವರು ಮೊದಲ ಬಾರಿಗೆ ಇಂಗ್ಲಿಷ್ ಕವಿ ಜಾನ್ ಹೆನ್ರಿ ನ್ಯೂಮನ್‌ರ 'Lead kindly light' ಕವನವನ್ನು ಕನ್ನಡಕ್ಕೆ 'ಕರುಣಾಳು ಬಾ ಬೆಳಕೆ' ಎಂದು ಸುಲಲಿತವಾಗಿ ಅನುವಾದ ಮಾಡಿ, ಅನುವಾದ ಮಾಡುವುದನ್ನು ತೋರಿಸಿಕೊಟ್ಟರು ಎಂದು ಸ್ಮರಿಸಿದರು. ಬೌದ್ಧಿಕ ಭಾಷಾಂತರದಂತೆ ನಿಜ ಜೀವನದ ವೈವಿಧ್ಯಮಯ ದಾಖಲೆಗಳ ಅನುವಾದವೇ ಜೀವನ್ಮುಖಿ ಭಾಷಾಂತರ ಎಂದು ವಿವರಿಸಿದರು.

ತಮ್ಮ ವೃತ್ತಿ ಜೀವನದಲ್ಲಿ ಅತಿ ಸಾಮಾನ್ಯ ಜನರಿಗೂ ಹತ್ತಿರವಾಗುವ ಅವಕಾಶ ಸಿಕ್ಕಿದೆ ಎಂದ ಜಯಕುಮಾರ್‌ರವರು, ಎಲ್ಲರೂ ಮಾತೃಭಾಷೆಯ ಬಗ್ಗೆ ಅತಿಯಾದ ವಿಶ್ವಾಸವಿಟ್ಟುಕೊಂಡಿರುವಂತೆ ಹೃದಯದ ಭಾಷೆ, ಕಾನೂನು ಭಾಷೆಯ ಬಗ್ಗೆಯೂ ಗಮನ ಹರಿಸಬೇಕು.ಸಾಮಾನ್ಯವಾಗಿ ಮರಣಪತ್ರ ಬರೆಯಲು ಜನ ಹಿಂದೇಟು ಹಾಕುತ್ತಾರೆ.ಆದರೆ ಮನೆಯಲ್ಲೇ ಕುಳಿತು ಬಿಳಿ ಹಾಳೆಯ ಮೇಲೆ ಬರೆಯಬಹುದು.ಇದನ್ನು ಯಾವಾಗ ಬೇಕಾದರೂ ರದ್ದು ಪಡಿಸಬಹುದು ಎಂದು ನುಡಿದರು.ಭಾಷಾಂತರ ಸುಲಭವಾದ ಕೆಲಸವಲ್ಲ. ಎರಡೂ ಭಾಷೆಗಳ ಮೇಲೆ ಹಿಡಿತವಿರಬೇಕು.ಭಾವಕ್ಕೆ ತಕ್ಕ ಭಾಷೆ ಬಳಸಬೇಕು.ಪದಗಳನ್ನು ಬಳಸುವಾಗ ಗೊಂದಲವಾಗದಂತೆ ಎಚ್ಚರಿಕೆ ವಹಿಸಬೇಕು.ಪದಗಳ ನಿರ್ವಹಣೆ ಮಾಡಲು ಜಾಣ್ಮೆಯ ಅಗತ್ಯವಿದೆ ಎಂದು ಹೇಳುತ್ತಾ, ತಮ್ಮ ಅನುಭವದ ಅನೇಕ ಉದಾಹರಣೆಗಳ ಮೂಲಕ ವಿಷಯವನ್ನು ಸ್ಪಷ್ಟಪಡಿಸಿದರು.

ಡಾ. ಆರ್ ಲಕ್ಷ್ಮೀ ನಾರಾಯಣ ಅವರು ಮಾತನಾಡುತ್ತಾ ಯಾವುದೇ ಭಾಷೆಯ ಅಭಿವೃದ್ಧಿಯಾಗಲು ಭಾಷಾಂತರವೇ ಕಾರಣ ಎಂದರೆ ತಪ್ಪಾಗಲಾರದು ಎಂದು ನುಡಿದರು.ಭಾಷಾಂತರಕಾರರಿಗೆ ಭಾಷೆಯ ಹೃದಯವನ್ನು ಹಿಡಿದಿಡುವ ಶಕ್ತಿ ಅಗತ್ಯ ಎಂದರು. ನೇರ ಅನುವಾದವಲ್ಲದಿದ್ದರೂ ರೂಪಾಂತರ, ಅನುಸೃಷ್ಟಿ, ಪುನರ್‌ಸೃಷ್ಟಿ ಎನ್ನಬಹುದಾದ ಕೃತಿಗಳು ಕನ್ನಡದಲ್ಲಿ ಹೇರಳವಾಗಿವೆ. ಕನ್ನಡ ಭಾಷೆ ಹೊಸತನವನ್ನು ಅಳವಡಿಸಿಕೊಂಡ ಮೇಲೆ ವಿವಿಧ ಭಾಷೆಗಳೊಂದಿಗೆ ಸಾಂಸ್ಕೃತಿಕ ವಿನಿಮಯ ಪ್ರಾರಂಭವಾಯಿತು ಎಂದು ಹೇಳುತ್ತಾ, ವಸ್ತುವಿನ ಹಿನ್ನೆಲೆ, ಭಾಷೆಯ ಚೌಕಟ್ಟುಗಳಲ್ಲಿ ಅನುವಾದಿಸುವುದು ಅಗತ್ಯ. ಅನುವಾದ ಸೃಜನಶೀಲ ಕಲೆ. ಹೊಸ ಅನುಭವದ ಶೋಧನೆಗೂ ಕಾರಣವಾಗಬಹುದಾದದ್ದು ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು.

ಲೇಖಕಿಯರ ಸಂಘದ ಅಧ್ಯಕ್ಷೆ ವನಮಾಲಾ ಸಂಪನ್ನಕುಮಾರ್ ಅವರು ಅಂದಿನ ಉಪನ್ಯಾಸಕ್ಕೆ ಮೆಚ್ಚುಗೆ ಸೂಚಿಸುತ್ತಾ, ಮುಂದಿನ ದಿನಗಳಲ್ಲಿ ಜಯಕುಮಾರ್ ಮರಿಯಪ್ಪರವರಿಂದ ಭಾಷಾಂತರದ ವಿಷಯದ ಬಗ್ಗೆ ಮತ್ತಷ್ಟು ವಿಷಯಗಳನ್ನು ತಿಳಿದುಕೊಳ್ಳಲು ನಾವೆಲ್ಲಾ ಆಸಕ್ತರಾಗಿದ್ದೇವೆ. ಅವರು ಇಂದು ತಮ್ಮ ಉಪನ್ಯಾಸದಲ್ಲಿ ತಿಳಿಸಿದ ಅನೇಕ ವಿಷಯಗಳು, ಮಹಿಳೆಯರಿಗೆ ಹಾಗೂ ಲೇಖಕಿಯರಿಗೆ ಅಗತ್ಯವಾದ ಮಾಹಿತಿಯೇ ಆಗಿದೆ ಎಂದು ಅವರಿಗೆ ತಮ್ಮ ಅಭಿನಂದನೆಗಳನ್ನು ಸಲ್ಲಿಸಿದರು.

ಸಂಘದ ಉಪಾಧ್ಯಕ್ಷೆ ಡಾ.ಜ್ಯೋತಿ ಶಶಿಕುಮಾರ್‌ರವರು ಸಭೆಗೆ ಮುಖ್ಯ ಅತಿಥಿಗಳನ್ನು ಪರಿಚಯಿಸಿದರು. ಕಾರ್ಯದರ್ಶಿ ನಾಗರತ್ನ ಚಂದ್ರಶೇಖರ್ ನಿರೂಪಣೆಯಲ್ಲಿ ಜರುಗಿದ ಸಭೆಗೆ ಸಹಕಾರ್ಯದರ್ಶಿ ಜಿ.ವಿ.ನಿರ್ಮಲ ವಂದನೆ ಸಲ್ಲಿಸಿದರು.

ಒಂದನೇ ಪುಟದಿಂದ

## ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಪ್ರದಾನ ಸಮಾರಂಭ



ಪ್ರಶಸ್ತಿ ಪ್ರದಾನ ಮಾಡಿದ ನಂತರ ಡಾ॥ನಾ. ದಾಮೋದರ ಶೆಟ್ಟಿಯವರು, ಬಿ.ಎಂ.ಶ್ರೀ ಪ್ರತಿಷ್ಠಾನದ ವೇದಿಕೆಯಲ್ಲಿ ನಿಲ್ಲುವುದೇ ಒಂದು ರೋಮಾಂಚನವಾದಂತೆ ಎಂದು ತಮ್ಮ ಅಧ್ಯಕ್ಷೀಯ ಭಾಷಣವನ್ನು ಪ್ರಾರಂಭಿಸಿದರು. ಶ್ರೀ ಶಾ.ಬಾಲೂರಾವ್ ಅವರ ಬೆಕ್ಕುಬಾವಿ–ನಾಟಕವನ್ನು ತಾವು ಕಾಲೇಜಿನಲ್ಲಿ ಆಯೋಜಿಸಿದ್ದನ್ನು ನೆನಪಿಸಿಕೊಂಡರು ಮತ್ತು ಸೂರ್ಯನ ಬಗ್ಗೆ ವಿವಿಧ ಆಯಾಮಗಳಲ್ಲಿ ಅವರು ಚಿತ್ರಿಸಿರುವ ರೀತಿಯೂ ಸೊಗಸಾಗಿದೆ ಎಂದು ಹೇಳಿದರು.

ದತ್ತಿ ಪ್ರಶಸ್ತಿ ಸ್ಥಾಪಕರಾದ ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ಅವರು ಉಪಸ್ಥಿತರಿದ್ದರು.

ಶ್ರೀಮತಿ ಎಂ.ಆರ್. ಕಮಲ ಹಾಗೂ ಶ್ರೀಮತಿ ಸುಂದರಿ ಅವರು ಅನುವಾದ ಪ್ರಶಸ್ತಿ ಆಯ್ಕೆ ಸಮಿತಿ ಸದಸ್ಯರಾಗಿದ್ದರು ಮತ್ತು ಶ್ರೀ ರಘುನಾಥ್ ಮತ್ತು ಡಾ.ಎಚ್.ಎಸ್.ಎಂ. ಪ್ರಕಾಶ್ ಅವರು ಯುವ ಬರಹಗಾರ ಪ್ರಶಸ್ತಿ ಆಯ್ಕೆ ಸಮಿತಿ ಸದಸ್ಯರಾಗಿದ್ದರು. ಡಾ.ಎಚ್.ಎಸ್.ಎಂ. ಪ್ರಕಾಶ್ ಅವರು ಎರಡೂ ಕೃತಿಗಳನ್ನು ಪರಿಚಯಿಸಿದರು. ಡಾ. ವಿಜಯಾ ಸುಬ್ಬರಾಜ್ ಅವರು ವಂದನಾರ್ಪಣೆ ಸಲ್ಲಿಸಿದರು.

## ೨೯-೧೦-೨೦೧೮

## ಎಂ.ಎ.ರಾಮಾನುಜಯ್ಯಂಗಾರ್ ,ಬಿ.ರಾಮಸ್ವಾಮಿ ಬೇಟೆರಾಯದೀಕ್ಷಿತ್ , ಎಸ್. ಶ್ರೀಕಂಠಯ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ

ಉಪನ್ಯಾಸಕರು : ಡಾ. ಮರುಳಸಿದ್ಧಪ್ಪ, ಖ್ಯಾತ ವಿದ್ವಾಂಸರು ಹಾಗೂ ಅಧ್ಯಕ್ಷರು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ವಿಷಯ : ಶ್ರೀರಂಗರ ನಾಟಕಗಳು




ಮೊದಲಿಗೆ ಡಾ. ಆರ್ ಲಕ್ಷ್ಮೀ ನಾರಾಯಣರವರು ಎಲ್ಲರನ್ನೂ ಸ್ವಾಗತಿಸಿ ದತ್ತಿ ಸ್ಥಾಪಕರುಗಳ ಬಗ್ಗೆ ಹಾಗೂ ಮುಖ್ಯ ಅತಿಥಿಗಳ ಪರಿಚಯ ಮಾಡಿಕೊಟ್ಟರು.ಡಾ, ಮರುಳಸಿದ್ದಪ್ಪ ಅವರು ಶ್ರೀರಂಗರ ನಾಟಕಗಳಲ್ಲಿ ಕಂಡು ಬರುವ ವಿಶೇಷತೆಗಳ ಬಗ್ಗೆ ಸುದೀರ್ಘವಾಗಿ ವಿವರಿಸಿದರು.

'ಶ್ರೀರಂಗರು ಮಹಾನ್ ನಾಟಕಕಾರರು'. ಸಾಮಾಜಿಕ ವಸ್ತುಗಳನ್ನಾಧರಿಸಿದ ನಾಟಕಗಳಂತೆಯೇ ಪೌರಾಣಿಕ ವಸ್ತುಗಳನ್ನಾಧರಿಸಿದ ನಾಟಕ ಗಳನ್ನೂ ರಚಿಸಿದ್ದಾರೆ.ಅವರ ನಾಟಕಗಳೆಂದರೆ ವಿಚಾರಗಳ ಸಂವಹನೆಗಾಗಿಯೇ ರಚಿಸಿದ್ದಾರೇನೋ ಎನ್ನುವಂತೆ ವಿಚಾರ ವೈಭವದ ಪ್ರತೀಕಗಳಾಗಿರುತ್ತಿದ್ದವು. ಅವರ ನಾಟಕಗಳನ್ನು ಅಭಿನಯಿಸುವವರಿಗೆ ಯಾವ ಸಮಸ್ಯೆಯೂ ಆಗದಂತೆ ವಿವರ ವಿವರವಾದ ಸೂಚನೆಗಳನ್ನು ನೀಡುತ್ತಿದ್ದರು. ನಿರ್ದೇಶಕರಿಗೆ ಕಷ್ಟ ಪಡಬೇಕಾಗಿಯೇ ಇರುತ್ತಿರಲಿಲ್ಲ. ಕೈಲಾಸಂ ನಂತರದಲ್ಲಿ ನಮ್ಮ ಸಾಮಾಜಿಕ ವಿಷಮತೆಗಳು ಮೌಢ್ಯಗಳು ಇವನ್ನೆಲ್ಲ ವಸ್ತುವಾಗಿಸಿಕೊಂಡು ಅವುಗಳ ವಿರುದ್ಧ ಒಂದು ಬಗೆಯ ಆಂದೋಳನವನ್ನೇ ನಡೆಸಿದವರು ಶ್ರೀರಂಗರು' ಹೀಗೆಂದು ಡಾ॥ ಮರುಳ ಸಿದ್ದಪ್ಪ ಅವರು ವಿವರಿಸಿದರು. ಡಾ॥ ವಿಜಯಾ ಸುಬ್ಬರಾಜ್ ವಂದನಾರ್ಪಣೆ ಸಲ್ಲಿಸಿದರು.

## ಪ್ರತಿಷ್ಠಾನದಲ್ಲಿ ಕನ್ನಡ ರಾಜ್ಯೋತ್ಸವ ಸಮಾರಂಭ

ಪ್ರತಿಷ್ಠಾನದಲ್ಲಿ ದಿನನಿತ್ಯವೂ ಕನ್ನಡದ ಕೆಲಸಗಳನ್ನೇ ಮಾಡುತ್ತಿದ್ದರೂ, ವಿದ್ಯುಕ್ತವಾಗಿ ಕನ್ನಡ ರಾಜ್ಯೋತ್ಸವದ ಆಚರಿಸುವ ರೂಢಿ ಇರಲಿಲ್ಲ. ಕನ್ನಡನಾಡು, ನುಡಿ, ಸಂಸ್ಕೃತಿ, ಸಂಶೋಧನೆಗಾಗಿ ಮೀಸಲಾಗಿರುವ ಸಂಸ್ಥೆಯೆಂದು, ವಿಧಿವತ್ತಾಗಿ ರಾಜ್ಯೋತ್ಸವವನ್ನು ಆಚರಿಸುವ ಅಭಿಪ್ರಾಯ ವ್ಯಕ್ತವಾದ್ದರಿಂದ, ನವೆಂಬರ್ ೩ನೇ ದಿನಾಂಕದಂದು ರಾಜ್ಯೋತ್ಸವದ ಆಚರಣೆಯನ್ನು ಸರಳವಾಗಿ ಮಾಡಲು ನಿರ್ಧರಿಸಲಾಯಿತು. ಕನ್ನಡ ಗೀತೆಗಳನ್ನು ಹಾಡುವುದರ ಮೂಲಕ ರಾಜ್ಯೋತ್ಸವದ ಆಚರಣೆಗೆ ಚಾಲನೆ ನೀಡಲಾಯಿತು.

ಕಾರ್ಯಕ್ರಮವು ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಆರ್.ಲಕ್ಷ್ಮೀನಾರಾಯಣ ಅವರ ಕಿರು ಪ್ರಸ್ತಾವನೆ ಮತ್ತು ಸ್ವಾಗತ ಭಾಷಣದಿಂದ ಆರಂಭಗೊಂಡಿತು. ಮುಖ್ಯ ಅತಿಥಿಗಳಾಗಿ ಪ್ರತಿಷ್ಠಾನದ ಹಿರಿಯ ಕಾರ್ಯಕಾರಿ ಸಮಿತಿಯ ಸದಸ್ಯರು ಮತ್ತು ನಿವೃತ್ತ ಬ್ಯಾಂಕ್ ಮ್ಯಾನೇಜರ್ ಶ್ರೀ ಡೀ.ನಂ. ವೆಂಕಟರಮಣಯ್ಯ ಅವರು ವೇದಿಕೆಯನ್ನು ಅಲಂಕರಿಸಿದ್ದರು. ಕರ್ನಾಟಕದ ಏಕೀಕರಣದ ಚಳುವಳಿಯ ಬಗ್ಗೆ , ರಾಜ್ಯಗಳ ವಿಂಗಡಣೆಯ ವಿಷಯಗಳನ್ನು ಕುರಿತು ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು.

ವಿವಿಧ ಕನ್ನಡಗೀತೆಗಳನ್ನು ಹಾಡಿ, ಕಾರ್ಯಕ್ರಮಕ್ಕೆ ಮೆರಗು ತಂದು ಕೊಟ್ಟವರು, ಸುಪ್ರಸಿದ್ಧ ಸಂಗೀತ ವಿದ್ವಾಂಸರುಗಳಾದ. ೧) ಶ್ರೀಮತಿ ಎಸ್. ರಮಾದೇವಿ ವಿಶ್ವೇಶ್ವರಯ್ಯ ೨) ವಿದ್ವಾನ ಶ್ರೀ ಅನಂತಮೂರ್ತಿ ೩) ಶ್ರೀಮತಿ ಸುಕನ್ಯಾ ವಿಜಯಕುಮಾರ್ ೪) ವಿದುಷಿ ಶ್ರೀಮತಿ ಗಿರಿಜಾಶಾಸ್ತ್ರಿ ಡಾ॥ ವಿಜಯಾ ಸುಬ್ಬರಾಜ್ ಅವರು ಬಿ.ಎಂ.ಶ್ರೀ. ವಿರಚಿತ "ಕರುಣಾಳು ಬಾ ಬೆಳಕೆ" ಗೀತೆಯನ್ನು ಹಾಡಿದರು.




ಹಿರಿಯ ಸದಸ್ಯರಾದ ನಾರಸಂದ್ರ ರಾಮಚಂದ್ರಯ್ಯನವರ ಸ್ವರಚಿತ ಕನ್ನಡಾಷ್ಟಕವನ್ನು ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ವಾಚಿಸಿದರು.

ಕಾರ್ಯಕ್ರಮವು ಡಾ. ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು.

## ೧೫-೧೧-೨೦೧೮ : ಬಿ.ಜಿ. ಕುಸುಮ ಸಾಮಾಜಿಕ ಸೇವಾ ಟ್ರಸ್ಟ್ (ರಿ) ದತ್ತಿ ಕಾರ್ಯಕ್ರಮ ಡಾ. ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ

ಉಪನ್ಯಾಸ: ಪ್ರೊ॥ ಎಂ. ಆರ್. ನಾಗರಾಜು(ನಿವೃತ್ತ ಪ್ರಾಧ್ಯಾಪಕರು, ವಿಜ್ಞಾನ ಲೇಖಕರು)

ವಿಷಯ : ಅಲಕ್ಷ್ಯದ ಸುಳಿಯಲ್ಲಿ ವಿಜ್ಞಾನ ಮತ್ತು ಸಾಹಿತ್ಯ

ಸಾಹಿತ್ಯಕ್ಕೂ ಮತ್ತು ವಿಜ್ಞಾನಕ್ಕೂ ಯಾವುದು ಆಕರ ಸಾಮಗ್ರಿ?ಮನುಷ್ಯನೇ ಅಲ್ಲವೇ? ಸಾಹಿತ್ಯ ವ್ಯಕ್ತಿಗತವಾದದ್ದು (Subjective)) ವಿಜ್ಞಾನ ವಸ್ತುಗತವಾದದ್ದು (Objective)ಹೀಗೆಂದು ತಮ್ಮ ಉಪನ್ಯಾಸವನ್ನು ಆರಂಭಿಸಿ, ವಿಜ್ಞಾನ ಬೋಧನೆಯಲ್ಲಿನ ನ್ಯೂನತೆಗಳನ್ನು, ಅವಜ್ಞತೆಗೆ ಕಾರಣಗಳನ್ನು ಕೆಲವು ಉದಾಹರಣೆಯೊಂದಿಗೆ ನಿರೂಪಿಸಿದರು. Multipse choice questions ವಿಜ್ಞಾನದ ಕುತೂಹಲವನ್ನೇ ಇಲ್ಲವಾಗಿಸಿಬಿಡುವ ಸಂದರ್ಭಗಳನ್ನು ವಿಶ್ಲೇಷಿಸಿದರು. ಪರೀಕ್ಷೆಯ ದೃಷ್ಟಿಯಿಂದ ವಿದ್ಯಾರ್ಥಿಗಳನ್ನು ಮತ್ತು ಅವರ ಮನಸ್ಥಿತಿಯನ್ನು ಸಿದ್ಧಪಡಿಸುವ ರೀತಿ, ಹಣಗಳಿಕೆಯೇ ವಿದ್ಯಾಭ್ಯಾಸದ ಧ್ಯೇಯ, ಅಂತಹ ವಾತಾವರಣಕ್ಕೆ ಪೂರಕವಾಗಿ ಸೌಲಭ್ಯಗಳನ್ನು ಒದಗಿಸುವ ರೀತಿ, ವಿದ್ಯಾರ್ಥಿಗಳಲ್ಲೂ ಮತ್ತು ಬೋಧಕರಲ್ಲೂ, ಕಲಿಕೆಗೂ ಮತ್ತು ಅನುಭವಕ್ಕೂ ಹೊಂದಾಣಿಕೆ ಇಲ್ಲದಿರುವಿಕೆ, ಉಪೇಕ್ಷೆಗೆ ಕೊಂಡೊಯ್ಯುತ್ತದೆ(disinterest) ಸಾಹಿತ್ಯಕ್ಕೆ ಕಲ್ಪನಾ ಶಕ್ತಿ ಮತ್ತು ಹೃದಯವಂತಿಕೆ ಬೇಕು. ವಿಜ್ಞಾನಕ್ಕೆ ಬುದ್ಧಿವಂತಿಗೆ ಮತ್ತು ಪೂರ್ವಸಿದ್ಧತೆ ಬೇಕು. ಕಲಿಕೆ ವ್ಯಾವಹಾರಿಕವಾಗಬೇಕು. ಕಲಿಕೆ ಮತ್ತು ವ್ಯವಹಾರಿಕತೆ ಒಂದನ್ನೊಂದು ಅವಲಂಬಿಸಿರುತ್ತವೆ. ಹತ್ತು ನಿಮಿಷಗಳ ಸಂವಾದ ಕಾರ್ಯಕ್ರಮದೊಂದಿಗೆ ಉಪನ್ಯಾಸ ಮುಕ್ತಾಯವಾಯಿತು.




ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ. ವಿಜಯಾ ಸುಬ್ಬರಾಜ್ ದತ್ತಿದಾನಿಗಳನ್ನು ಉಪನ್ಯಾಸಕರನ್ನು, ವಿದ್ವಾಂಸರೆಲ್ಲರನ್ನು ಸಭೆಗೆ ಸ್ವಾಗತಿಸಿದರು. ಡಾ.ಆರ್.ಲಕ್ಷ್ಮೀನಾರಾಯಣ ಅವರು ದತ್ತಿ ಕಾರ್ಯಕ್ರಮದ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿ, ಉಪನ್ಯಾಸಕರ ಕಿರುಪರಿಚಯವನ್ನು ಮಾಡಿದರು.

ಕಾರ್ಯಕ್ರಮವು ಶ್ರೀ ಬಿ.ಎಸ್. ಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು.

೭ನೇ ಪುಟಕ್ಕೆ




**ಪ್ರಾಣ:** ಇದೊಂದು ಸಂಸ್ಕೃತ ಶಬ್ದ. ಇದಕ್ಕೆ ಕನ್ನಡದಲ್ಲಿ ತದ್ಭವವಾಗಿ 'ಹರಣ' ಎಂಬ ರೂಪವಿದೆ; ಆದರೆ ಪ್ರಾಣ ಶಬ್ದವೇ ಹೆಚ್ಚು ಬಳಕೆಯಲ್ಲಿದೆ.ಪ್ರಾಣ ಎಂದರೆ ಉಸಿರು ಎಂದರ್ಥ.ಉಸಿರಾಟ ಜೀವವಿರುವ ಲಕ್ಷಣವಾದದ್ದರಿಂದ ಪ್ರಾಣ ಎಂದರೆ ಜೀವ ಎಂಬ ಅರ್ಥವೂ ಇದೆ. "ನಿನ್ನನಗಲ್ವಗಲ್ಕೆಯುಂ ಪ್ರಾಣದಗಲ್ಕೆಯುಂ ಸಮಂ" ('ಆದಿಪುರಾಣ').ಹೀಗಾಗಿ ತುಂಬ ಪ್ರೀತಿಪಾತ್ರ ಎಂಬರ್ಥವೂ ಪ್ರಾಪ್ತವಾಗುತ್ತದೆ.("ಪ್ರಾಣದಿನಧಿಕ ಎನಗೆ ನೀಂ" – 'ಪಾರ್ಶ್ವನಾಥ ಪುರಾಣ').'ಅಮರಕೋಶ'ದಲ್ಲಿ ಈ ಶಬ್ದಕ್ಕೆ ಶಕ್ತಿ, ಪರಾಕ್ರಮ ಎಂಬರ್ಥಗಳನ್ನೂ ಹೇಳಿದೆ ("ಶಕ್ತಿಃ ಪರಾಕ್ರಮಪ್ರಾಣೌ").ಪ್ರಾಣ ಎಂಬುದು ಐದು ಬಗೆಯ ವಾಯುಗಳಲ್ಲಿ ಒಂದು.ಈ ಶಬ್ದಕ್ಕೆ ಬ್ರಹ್ಮ ಎಂಬರ್ಥವೂ ಇದೆ.'ಪ್ರಾಣದೇವರು', 'ಮುಖ್ಯಪ್ರಾಣ' 'ಪ್ರಾಣೇಶ', 'ಪ್ರಾಣನಾಥ', 'ಪ್ರಾಣರಾಯ' ಮುಂತಾದವಕ್ಕೆ ಆಂಜನೇಯ ಎಂಬರ್ಥವಿದೆ – ಈ ಎಲ್ಲ ಶಬ್ದಗಳನ್ನೂ ಈ ಅರ್ಥದಲ್ಲಿ ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಬಳಸುತ್ತಾರೆ.

'ಪ್ರಾಣನ' ಎಂದರೆ ಬದುಕಿಸುವುದು ಎಂದರ್ಥ ("ಎನ್ನ ತಂದೆ .. ..ಮತ್ ಪ್ರಾಣನ ಪ್ರಯತ್ನ ತತ್ಪರನಾಗಿ" ('ಕರ್ಣಾಟಕ ಕಾದಂಬರಿ').'ಪ್ರಾಣೋಪಕಾರ' ಎಂದರೆ ಜೀವವನ್ನುಳಿಸುವಂಥ ಉಪಕಾರ ("ನೀಮೆನಗೆ ಪ್ರಾಣೋಪಕಾರಂಗೆಯ್ದಿರ್" 'ಪಂಚತಂತ್ರ'). 'ಪ್ರಾಣಂಬಡೆ' ಎಂದರೆ ಜೀವವನ್ನು ಹೊಂದು ಎಂದರ್ಥ ("ವೀರಭಕ್ತಿಯೊಳಟ್ಟೆಯಲಿ ತಲೆ ಸೇರಿಸಲು ಪ್ರಾಣಂಬಡೆದನು" – ಭೀಮಕವಿಯ 'ಬಸವಪುರಾಣ'). 'ಪ್ರಾಣಾಹುತಿ' ಎಂದರೆ ಬಲಿ ("ಗಾಳದ ತುದಿಯೊಳಿಪ್ಪ ಭೂನಾಗನಂ ಕಂಡು ಪ್ರಾಣಾಹುತಿಯೆಂದು ಸವಿವ" ಕನಕದಾಸರ ಕೀರ್ತನೆ). 'ಪ್ರಾಣತೆಗೆ' ಎಂದರೆ ಕೊಲ್ಲು ಎಂಬರ್ಥದ ಜೊತೆಗೆ ಕಾಟ ಕೊಡು ಎಂಬರ್ಥವೂ.'ಸುಮ್ಮನೆ ನನ್ನ ಪ್ರಾಣ ತೆಗೀಬೇಡ' ಎಂಬಂತಹ ಮಾತುಗಳನ್ನು ಗಮನಿಸಿ.'ಪ್ರಾಣಹಿಂಡು' ಎಂದರೂ ಇದೇ ಅರ್ಥವೇ.'ಪ್ರಾಣ ಕಳೆದುಕೋ' 'ಪ್ರಾಣ ಹೋಗು' 'ಪ್ರಾಣಘಾತಕ' 'ಪ್ರಾಣಯಾತನೆ' ಮುಂತಾದ ನುಡಿಗಟ್ಟುಗಳು ಬಳಕೆಯಲ್ಲಿವೆ. 'ಪ್ರಾಣವಲ್ಲಭ' 'ಪ್ರಾಣವಲ್ಲಭೆ' ಅಥವಾ 'ಪ್ರಾಣೇಶ್ವರ' 'ಪ್ರಾಣೇಶ್ವರಿ' ಎಂದರೆ ಪ್ರಿಯಪ್ರೇಯಸಿಯರು.ವೀರಶೈವದಲ್ಲಿ 'ಪ್ರಾಣಲಿಂಗ'ದ ಪರಿಕಲ್ಪನೆಯಿದೆ.

ಪ್ರಾಣವುಳ್ಳುದೇ 'ಪ್ರಾಣಿ'."ಪ್ರಾಣಿ ಜಂತು ದೇಹಿಯೆನಿಕ್ಕುಂ" ಎಂದು 'ಅಭಿಧಾನ ವಸ್ತುಕೋಶ'ದ ವಿವರಣೆ.ಪ್ರಾಣಿಯನ್ನು ಕೊಲ್ಲುವುದೇ 'ಪ್ರಾಣಿವಧೆ' "ಪ್ರಾಣಿವಧೆಯೆ ಪರಮಪಾತಕವೆಂಬುದಱಿಂ" 'ಪಂಚತಂತ್ರ').ಪ್ರಾಣಿಗಳ ಬಗ್ಗೆ ತಿಳಿಸುವ ವಿಜ್ಞಾನವೇ 'ಪ್ರಾಣೀಸಾಸ್ತ್ರ' ಅಥವಾ 'ಪ್ರಾಣಿವಿಜ್ಞಾನ'.

======

ಬಂಡವಾಳ: ಇದರ ಮೂಲ ಸಂಸ್ಕೃತದ 'ಭಾಂಡ' ಎಂಬಂತೆ ತೇ–ೂೀರುತ್ತದೆ.ಅದರ ಅರ್ಥ ಸರಕು ಅಥವಾ ಸಾಮಗ್ರಿ ಇಡುವ ಉಗ್ರಾಣ ಅಥವಾ ಪಾತ್ರೆ ಎಂದು.ಭಾಂಡಾಗಾರ ಎಂಬುದೂ ಉಗ್ರಾಣವನ್ನು ಸೂಚಿಸುತ್ತದೆ.ಮುಂದೆ ಅದು ಹಣವಿರುವ ಕೋಶ ಎಂರ್ಥವನ್ನೂ ಪಡೆದಂತೆ ಕಾಣುತ್ತದೆ.ಭಾಂಡಾಗಾರ>ಭಾಂಡಾರ>ಭಂಡಾರ ಎಂದಾಗಿದೆ.'ಭಂಡ' ಕನ್ನಡದಲ್ಲಿ ಅಲ್ಪಪ್ರಾಣವಾಗಿ ಬಂಡ ಎಂಬ ರೂಪ ತಳೆಯಿತು.ಮಾರಾಟದ ಸರಕು ಎಂಬರ್ಥದಲ್ಲಿ ಈ ಶಬ್ದ 'ವಡ್ಡಾರಾಧನೆ'ಯಲ್ಲೇ 'ಭಂಡ' ಹಾಗೂ 'ಬಂಡ' ಎರಡು ರೂಪಗಳಲ್ಲೂ ಬಂದಿದೆ ("ತಮ್ಮ ಕೊಂಡುಪೋದ ಭಂಡಮಂ ಮಾಱೆ" ಹಾಗೂ "ಬಂಡಮುಮೆಟ್ಟುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡು ಪೋದರ್").

ವ್ಯಾಪಾರದ ಮೂಲಧನ ಎಂಬರ್ಥದಲ್ಲಿ ಬಂಡವಾಳ ಶಬ್ದವು ಬಂಡ ಮತ್ತು (ಕರವಾಲ, ಭಿಂಡಿವಾಳ ಮುಂತಾದೆಡೆಗಳಲ್ಲಿರುವಂತೆ) ವಾಲ ಎಂಬುದರೊಡನೆ ಸೇರಿರಬೇಕು.ಈ ಶಬ್ದವು ಭಂಡವಾಳ, ಭಂಡವಲು, ಬಂಡವಲ, ಬಾಂಡವಲು ಮುಂತಾದ ರೂಪಗಳನ್ನು ತಳೆಯುತ್ತದೆ. ಹದಿನಾಲ್ಕನೆಯ ಶತಮಾನದ ನಾಗರಾಜನ ಕೃತಿಯಾದ 'ಪುಣ್ಯಾಸ್ರವ'ದಲ್ಲಿ "ವ್ಯವಹಾರಿಸುವಂಗೆ ಬಂಡವಲಮಿಲ್ಲದೆಂತು ಪೋದಪ್ಪೆ" ಎಂಬ ವಾಕ್ಯವಿದೆ. ಮೊದಲು ಸರಕು ವ್ಯಾಪಾರದ ಮೂಲವಾಗಿದ್ದರೆ ಬರಬರುತ್ತ, ಹಣದ ಬಳಕೆ ಹೆಚ್ಚಾದಂತೆ, ಹಣವಾಯಿತು. ಹೀಗಾಗಿ ಎಲ್ಲದಕ್ಕೂ ಮೂಲವಾದುದನ್ನೂ ಬಂಡವಾಳ ಎಂಬ ಹೆಸರಿನಿಂದಲೇ ಸೂಚಿಸುವಂತಾಯಿತು.'ಮಾತೇ ಅವನ ಬಂಡವಾಳ' ಎಂಬಂತಹ ಕಡೆಗಳಲ್ಲಿ ಈ ಅರ್ಥವಿದೆ. ಮುಂದೆ ಅದು ಸಾಮರ್ಥ್ಯವನ್ನೂ ಸೂಚಿಸುವಂತಾಯಿತು: ಸಾಮರ್ಥ್ಯವಿಲ್ಲದೆ ಕೊಚ್ಚಿಕೊಳ್ಳುವುದನ್ನು ಸೂಚಿಸುವ 'ಬಂಡವಾಳ್ವಿಲ್ಲದ ಬಡಾಯಿ' ಎಂಬ ನಾಣ್ಣುಡಿಯೇ ಇದೆ. ಆ ಹೆಸರಿನ ಟಿ.ಪಿ.ಕೈಲಾಸಂ ಅವರ ನಾಟಕ ಪ್ರಸಿದ್ಧವಾಗಿದೆ.

ಹಣವಿರುವವನು 'ಬಂಡವಾಳಗಾರ' ಅಥವಾ 'ಬಂಡವಾಳಿಗ'ನಾದರೆ, ಹಣಗಳಿಕೆಗೇ ಪ್ರಾಶಸ್ತ್ಯವೀಯುವ ಪ್ರವೃತ್ತಿ ಬಂಡವಾಳಶಾಹಿ ಬುದ್ಧಿ. ಮಿತಿಯಿಲ್ಲದ ಹಣಗಳಿಕೆಗೆ ಅವಕಾಶವೀಯುವ ಸರ್ಕಾರದ ಧೋರಣೆ ಬಂಡವಾಳಶಾಹಿ ಪ್ರಭುತ್ವ. ಇಂಗ್ಲಿಷ್‌ನ 'ಕ್ಯಾಪಿಟಲಿಸ್ಮ್' ಎಂಬುದಕ್ಕಿದು ಸಂವಾದಿ.

## ಕಿರು ಪರಿಚಯ

### ಡಾ. ಎಸ್.ಎಲ್. ಶ್ರೀನಿವಾಸ ಮೂರ್ತಿ

ಬೆಂಗಳೂರಿನ ಬಸವನಗುಡಿ ವಿಜಯ ವಿಭಜಿತ ಪದವಿ ಪೂರ್ವ ಕಾಲೇಜಿನ 'ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಇವರು ಸಸ್ಯ ಅಂಗಾಂಶ ಕೃಷಿ(plant tissue Culture) ಕ್ಷೇತ್ರದಲ್ಲಿಯೂ ಹಲವು ವರ್ಷಗಳ ಅನುಭವ ಹೊಂದಿರುತ್ತಾರೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಹಾಗೂ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಿಂದ ಪತ್ರಿಕೋದ್ಯಮದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುತ್ತಾರೆ.

'ಶಾಸನ ಪಿತಾಮಹ' ಎಂದು ಪ್ರಸಿದ್ಧರಾಗಿದ್ದ ಬೆಂಜಮಿನ್ ಲೂಯಿರೈಸ್ ರವರ ಜೀವನ ಮತ್ತು ಸಾಧನೆಯನ್ನು ಕುರಿತಂತೆ ಇವರು ರಚಿಸಿದ ಮಹಾಪ್ರಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಲಭ್ಯವಾಗಿದೆ. ಈ ಸಂಬಂಧವಾಗಿ ಆಕ್ಸ್‌ಫರ್ಡ್, ಕೇಂಬ್ರಿಡ್ಜ್, ಲಂಡನ್ ಮುಂತಾದ ವಿಶ್ವವಿದ್ಯಾಲಯಗಳಿಗೆ ಭೇಟಿ ನೀಡಿ ಅಪರೂಪದ ದಾಖಲೆಗಳನ್ನು ಸಂಗ್ರಹಿಸಿದ ಹೆಗ್ಗಳಿಕೆ ಇವರದಾಗಿರುತ್ತದೆ. ಡಾ. ಶ್ರೀನಿವಾಸ ಹಾವನೂರ್ ಅವರ ಜೊತೆ ಒಡಗೂಡಿ ಪಾ.ವೆಂ.ಆಚಾರ್ಯರ ಸಮಗ್ರ ಬರಹಗಳ ಹಲವು ಸಂಪುಟಗಳನ್ನು ಸಂಪಾದಿಸಿದ್ದಾರೆ. ಪ್ರಸಕ್ತ ಶ್ರೀಯುತರು ಸಂಶೋಧನೆ, ಕೃತಿ ಸಂಪಾದನೆ, ಪುಸ್ತಕ ವಿಮರ್ಶೆ, ಸಚಿತ್ರ ಲೇಖನಗಳ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

## 'ಅವಲೋಕನ'

### ನೀವು ರಚಿಸಿದ ಸಾಹಿತ್ಯ ಕೃತಿಯ ವಿಮರ್ಶೆಯನ್ನು ಪ್ರಕಟಿಸಬೇಕೆ?

ಕನ್ನಡ ಭಾಷೆಯಲ್ಲಿ ಹೊಸದಾಗಿ ಅಂದರೆ ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಳ್ಳುವ ಮೌಲಿಕ ಸಾಹಿತ್ಯ ಕೃತಿಗಳನ್ನು ಹೊಂಗನಸು ಓದುಗರಿಗೆ ಪರಿಚಯಿಸುವ ಉದ್ದೇಶದಿಂದ ನಾವು ಹೊಸ ಅಂಕಣವನ್ನು ಆರಂಭಿಸಿದ್ದೇವೆ. ಈ ಶೀರ್ಷಿಕೆಯಡಿಯಲ್ಲಿ ಪ್ರತಿ ತಿಂಗಳೂ ಹೊಂಗನಸುವಿನಲ್ಲಿ 'ಅವಲೋಕನ' ಅಂಕಣದಲ್ಲಿ ಹೊಸದಾಗಿ ಪ್ರಕಟವಾದ ಮೌಲಿಕವಾದ ಸಾಹಿತ್ಯ ಕೃತಿಗಳ ವಿಮರ್ಶೆಗಳನ್ನು ಪ್ರಕಟಿಸಲಾಗುತ್ತಿದೆ. ಆಸಕ್ತ ಲೇಖಕರು ಕಳೆದ ಮೂರು ತಿಂಗಳುಗಳ ಅವಧಿಯಲ್ಲಿ ಪ್ರಕಟಗೊಂಡ ಕೃತಿಗಳ ಒಂದು ಪ್ರತಿಯನ್ನು ನಮಗೆ ತಲುಪಿಸಬಹುದು. ಈ ಅಂಕಣಕ್ಕಾಗಿ ಸ್ವೀಕರಿಸಿದ ಕೃತಿಗಳ ಪ್ರತಿಗಳನ್ನು ಹಿಂದುರಿಗಿಸಲಾಗುವುದಿಲ್ಲ.

೫ನೇ ಪುಟದಿಂದ

## ಹಳಗನ್ನಡ ತರಗತಿಗಳ ಉದ್ಘಾಟನಾ ಸಮಾರಂಭ

ದಿನಾಂಕ :೧೬-೧೧-೨೦೧೮

ಹಳಗನ್ನಡದ ವಿದ್ವಾಂಸರು ಮತ್ತು ಜಾನಪದ ಕ್ಷೇತ್ರದಲ್ಲಿ ವಿಶೇಷವಾಗಿ ಸೇವೆ ಸಲ್ಲಿಸಿದ ಡಾ. ಜಯಚಂದ್ರ ಹಳಗನ್ನಡ ತರಗತಿಗಳ ಉದ್ಘಾಟನಾ ಸಮಾರಂಭವನ್ನು ದೀಪ ಬೆಳಗುವುದರ ಮೂಲಕ ವಿದ್ಯುಕ್ತವಾಗಿ ಚಾಲನೆ ನೀಡಿದರು.

ಜೈನ ಸಾಹಿತ್ಯ ಕುರಿತ ಲೇಖನಗಳ ಸಂಕಲನ 'ದಿವ್ಯ ಧ್ವನಿ' ಅವರು ಪ್ರಕಟಿಸಿರುವ ಒಂದು ಪ್ರಬುದ್ಧವಾದ ಲೇಖನಗಳ ಸಂಗ್ರಹ. ಇವರ




ಕುಟುಂಬದ ಸದಸ್ಯರೆಲ್ಲರೂ ಕನ್ನಡದ ಏಳಿಗೆಗಾಗಿ ಶ್ರಮಿಸುತ್ತಿರುವ ಕನ್ನಡಿಗರು, 'ಜಾನಪದ ತಜ್ಞ' ಪ್ರಶಸ್ತಿ ವಿಜೇತರೂ ಹೌದು. ಇವರ ಎರಡು ಸಂಪುಟಗಳು – ಜಾನಪದ ಜೈನ ವಿಶೇಷವಾಗಿ ಜಾನಪದ ಕ್ಷೇತ್ರವನ್ನು ಕುರಿತ ಸಮಗ್ರ ಅಧ್ಯಯನ, ಹೀಗೆಂದು ಅತಿಥಿಗಳನ್ನು ಸಭೆಗೆ ಪರಿಚಯಿಸಿ, ಎಲ್ಲರಿಗೂ ಸ್ವಾಗತ ಕೋರಿ, ಡಾ.ಆರ್.ಲಕ್ಷ್ಮೀನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಕಳೆದ ಸಾಲಿನಲ್ಲಿ ಹಳಗನ್ನಡ ಡಿಪ್ಲೊಮಾ ತರಗತಿಗೆ ತಾವು ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದನ್ನು ನೆನಪಿಸಿಕೊಳ್ಳುತ್ತಾ, ಪ್ರತಿಷ್ಠಾನದಲ್ಲಿ ಹಳಗನ್ನಡ ತರಗತಿಗಳ ಮತ್ತು ಶಿಬಿರಗಳ ಆರಂಭದ ದಿನಗಳನ್ನು ಜ್ಞಾಪಿಸಿಕೊಂಡರು.

'ಹಳಗನ್ನಡ ಓದುವ ಜನ ಹಿಂದೆಯೂ ಇದ್ದರೂ, ಇನ್ನು ಮುಂದೆಯೂ ಈ ಸಂತತಿ ಮುಂದುವರೆಯುತ್ತದೆ. ದುರದೃಷ್ಟವೆಂದರೆ ಕನ್ನಡ ಉಪನ್ಯಾಸಕರೆಲ್ಲರಿಗೂ ಹಳಗನ್ನಡದ ಬಗ್ಗೆ ಅಕ್ಕರೆ ಮತ್ತು ಒಲವು ಇಲ್ಲದಿರುವುದು. ಆದರೆ ಹಳಗನ್ನಡವನ್ನು ಪಠ್ಯದಲ್ಲಿ ಸೇರಿಸಲೇ ಬೇಕಾದ ಅನಿವಾರ್ಯತೆ ಇದೆ.' ಎಂದು ಹೇಳಿದ ಶ್ರೀ ಜಯಚಂದ್ರ ಅವರು, ಹಳಗನ್ನಡದಲ್ಲಿ ಇನ್ನೂ ಆಗಬೇಕಾದ ಕಾರ್ಯಗಳ ಬಗ್ಗೆ ಎಲ್ಲರ ಗಮನ ಸೆಳೆದರು. ಅವರು ಈ ಕೆಳಕಂಡ ಕಾರ್ಯಗಳನ್ನು ಸಾಧಿಸಲು ಸಲಹೆ ನೀಡಿದರು.

೧. ಕರ್ನಾಟಕ ವಿಶ್ವವಿದ್ಯಾಲಯಗಳೆಲ್ಲವೂ, ನಮ್ಮ ಹಿಂದಿನ ತಲೆಮಾರಿನ ಒಬ್ಬೊಬ್ಬ ಕವಿಗಳ ಹೆಸರಿನಲ್ಲೂ ಡಿಪ್ಲೊಮಾ ತರಗತಿಗಳನ್ನು ಪ್ರಾರಂಭಿಸುವುದು.

೨. ಕನ್ನಡ ಸ್ನಾತಕೋತ್ತರ ಪದವೀದರರು, ಕಡ್ಡಾಯವಾಗಿ ಒಬ್ಬ ಕವಿಯ ಬಗ್ಗೆ ಡಿಪ್ಲೊಮಾ ಪದವಿ ಪಡೆದಿರಬೇಕು ಎಂಬ ನಿಯಮವನ್ನು ಜಾರಿಗೆ ತರುವುದು.

೩. ಹಳಗನ್ನಡ ವ್ಯಾಕರಣಕ್ಕೆ ಒಂದು ಪ್ರತ್ಯೇಕವಾದ ಪಾರಿಭಾಷಿಕ ಶಬ್ದಕೋಶ ರಚನೆಯಾಗಬೇಕು. ನಂತರ ಹಳಗನ್ನಡ ಏಕೆ ಓದಬೇಕು, ಎಂಬ ಪ್ರಶ್ನೆಯನ್ನು ಹಾಕಿದ ಡಾ. ಜಯಚಂದ್ರ ಅವರು ನೇರವಾದ ಎರಡು ಉತ್ತರಗಳನ್ನೂ ನೀಡಿದರು.

೧. ಪಂಪ, ರನ್ನ, ಜನ್ನ, ಹರಿಹರ, ರಾಘವಾಂಕ, ಮುಂತಾದ ಕವಿಗಳನ್ನು ಅರಿಯಲು ಹಳಗನ್ನಡ ಜ್ಞಾನ ತೀರಾ ಅಗತ್ಯ.

೨. ಆತ್ಮ ತೃಪ್ತಿಗಾಗಿ, ಸಾಂಸ್ಕೃತಿಕ ಮೌಲ್ಯವರ್ಧನೆಗಾಗಿ ಮತ್ತು ಸಮಷ್ಟಿ ನೆಲೆಯಲ್ಲಿ ಹಳಗನ್ನಡದ ಅಭಿವೃದ್ಧಿಯ ಪ್ರಯತ್ನವಾಗಬೇಕು.

ಜೊತೆಗೆ "ವಡ್ಡಾರಾಧನೆ" ಕುರಿತು ನಡೆದ ಸಂಶೋಧನೆ ಬಗ್ಗೆಯೂ ಹಲವಾರು ಅಂಶಗಳನ್ನು ವಿದ್ಯಾರ್ಥಿಗಳೊಂದಿಗೆ ಹಂಚಿಕೊಂಡರು. ಆರಾಧನಾ ಕರ್ಣಾಟ ಟೀಕಾ ವಡ್ಡಾರಾಧನೆಗೆ ಮೂಲ ಹೆಸರು ಭಗವತೀ ಆರಾಧನಾ ಅಥವಾ ಮೂಲಾರಾಧನಾ ಎಂಬ ಗ್ರಂಥದಲ್ಲಿ ಬರುವ ಕವಚ ಎಂಬ ಭಾಗದ ಹತ್ತೊಂಬತ್ತು ಗಾಹೆಗಳೇ ಕನ್ನಡ ಆರಾಧನಾ ಗ್ರಂಥಕ್ಕೆ ಮೂಲ ಎಂದು ಅಭಿಪ್ರಾಯಪಟ್ಟರು.

ಡಾ. ವಿಜಯಾ ಸುಬ್ಬರಾಜ್ ಅವರು ಪ್ರತಿಷ್ಠಾನದ ಹಳಗನ್ನಡ ತರಗತಿಗಳಲ್ಲಿ ತಾವು ಬೋಧಿಸುತ್ತಿದ್ದ ಕನ್ನಡ ಸಾಹಿತ್ಯ ಚರಿತ್ರೆಯ ಪಠ್ಯಗಳನ್ನು ನೆನಪಿಸಿಕೊಂಡು, ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು. ಹಳಗನ್ನಡದ ಪ್ರಸ್ತುತತೆ ಬಗ್ಗೆ ಚರ್ಚೆ ನಡೆಯುತ್ತಿರುವ ಸಂದರ್ಭದಲ್ಲಿಯೂ, ಹೆಮ್ಮೆ ತರುವಂತಹ ವಿಷಯವೇನೆಂದರೆ, ಬಿಎಂಶ್ರೀ ಪ್ರತಿಷ್ಠಾನವು ಕಳೆದ ಇಪ್ಪತ್ತು ವರ್ಷಗಳಿಂದಲೂ ಹಳಗನ್ನಡ ತರಗತಿಗಳನ್ನು ಶಿಬಿರಗಳನ್ನು ನಡೆಸಿಕೊಂಡು ಬರುತ್ತಿದ್ದು, ಪ್ರೌಢಾರ್ಥಿಗಳು ಈ ತರಗತಿಗಳಲ್ಲಿ ಪಾಲ್ಗೊಳ್ಳುತ್ತಿರುವುದು ಹೆಮ್ಮೆಯ ಸಂಗತಿಯಾಗಿದ್ದು, ಈ ಕಾರ್ಯಕ್ರಮದ ಯಶಸ್ಸಿಗೆ ಕಾರಣ ಕರ್ತರಾದ ಎಲ್ಲರಿಗೂ ವಂದಿಸಿದರು.

## ೧೯-೧೧-೨೦೧೮ "ಅಕ್ಕರಗೊಟ್ಟಿ" ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ ವಿಷಯ : ಇಂದಿನ ಸಾಹಿತ್ಯದ ಸವಾಲುಗಳು

**ಚಾಲನೆ : ಪ್ರೊ|| ನೈಷಧಂಎಸ್ಸೆ**

**ನಿವೃತ್ತ ಅಧ್ಯಾಪಕರು ಹಾಗೂ ಖ್ಯಾತ ಲೇಖಕರು**

ಪ್ರೊ|| ನೈಷಧಂ ಎಸ್ಸೆ ಅವರು ಇಂದಿನ ಕಾಲದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗುರುತಿಸಿ ಈ ಕಾಲಘಟ್ಟದಲ್ಲಿ ಸಾಹಿತ್ಯ ರಚನೆಗೆ



ಎದುರಾಗಿರುವ ಸವಾಲುಗಳ ಬಗ್ಗೆ ತಿಳಿಸಿ ಚರ್ಚೆಯನ್ನು ಪ್ರಾರಂಭಿಸಿದರು. ಪ್ರೊ.ಜಿ. ಅಶ್ವತ್ಥ ನಾರಾಯಣ ಅವರು ತಮ್ಮ ವಾದವನ್ನು ಮಂಡಿಸಿ ತಂತ್ರಜ್ಞಾನದ ಬೆಳವಣಿಗೆ ಹಿನ್ನಲೆಯಲ್ಲಿ ಆಗಬೇಕಾದ ಕೆಲಸಗಳನ್ನು ಗುರುತಿಸಿದರು. ಡಾ. ಆರ್.ಲಕ್ಷ್ಮೀನಾರಾಯಣ ಅವರು ಬದಲಾವಣೆಗಳು ಸಹಜವಾಗಿರುವ ಕಾರಣದಿಂದ ಸಮಾಜವು ಬದಲಾವಣೆಗಳೊಂದಿಗೆ ಹೊಂದಿಕೊಳ್ಳುತ್ತದೆ ಎಂಬ ವಾದವನ್ನು ಮಂಡಿಸಿ ಹಲವಾರು ಉದಾಹರಣೆಗಳನ್ನು ನೀಡಿದರು. ಶ್ರೀ ರವೀಂದ್ರನಾಥ ಅವರು ಚರ್ಚೆಯಲ್ಲಿ ಪಾಲ್ಗೊಂಡು ಇಂದಿನ ಸಮಾಜದಲ್ಲಿ ಸಮಯದ ಕೊರತೆಯನ್ನು ಗುರುತಿಸಿ ವಿಷಯ ಮಂಡನೆಯಲ್ಲಿ ಬದಲಾವಣೆಗಳನ್ನು ತರುವುದೇ ಒಂದು ದೊಡ್ಡ ಸವಾಲಾಗಿರುತ್ತದೆ. ಜೊತೆಗೆ ಇಂದಿನ ಸಮಾಜದಲ್ಲಿ ಕಣ್ಣುಗಳ ಬಳಕೆ ಬಹಳ ಹೆಚ್ಚಾಗಿದ್ದು ಶ್ರವಣಕ್ಕೆ ಸೂಕ್ತವಾಗುವಂತಹ ಸಾಹಿತ್ಯವನ್ನು ರಚಿಸುವುದೂ ಒಂದು ಸವಾಲು ಎಂದು ಅಭಿಪ್ರಾಯ ಪಟ್ಟರು.

ಡಾ, ವಿಜಯಾ ಸುಬ್ಬರಾಜ್ ಅವರು ಎಲ್ಲರಿಗೂ ವಂದಿಸಿದರು.

## ಕಿರು ಪರಿಚಯ : ಡಾ. ಬಿ.ಜಿ. ಎಲ್ ಸ್ವಾಮಿ



'ಪ್ರಖ್ಯಾತ ತಂದೆಯ ಪ್ರಖ್ಯಾತ ಪುತ್ರ' – ಎಂಬ ಅಗ್ಗಳಿಕೆಗೆ ಪಾತ್ರರಾದ ಡಾ. ಬಿ. ಜಿ. ಎಲ್. ಸ್ವಾಮಿ (ಜನನ: ೧೯೧೮. ಮರಣ ೧೯೮೦) )ಅವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ವಿಶಿಷ್ಟವಾದ ವ್ಯಕ್ತಿತ್ವದವರು. ನೂರಾರು ಸಸ್ಯಶಾಸ್ತ್ರೀಯ ಸಂಪ್ರಬಂಧಗಳನ್ನು ರಚಿಸಿದ, ಹಲವು ಸಸ್ಯಗಳನ್ನು ಪತ್ತೆ ಹಚ್ಚಿದ ಸ್ವಾಮಿ ಅವರು ಅಂತಾರಾಷ್ಟ್ರೀಯ ಖ್ಯಾತಿಯ ವಿಜ್ಞಾನಿ, ಸಂಶೋಧಕ. ಸೆಂಟ್ರಲ್ ಕಾಲೇಜಿನಿಂದ ಆನರ್ಸ್ ಮುಗಿಸಿ ಅತಿ ಕಿರಿಯ ವಯಸ್ಸಿನಲ್ಲೇ ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಖ್ಯಾತ ಸಸ್ಯ ವಿಜ್ಞಾನಿ ಇರ್ವಿಂಗ್ ಬೈಲಿಯವರ ಶಿಷ್ಯರಾಗಿ ಡಿ. ಲಿಟ್ ಪದವಿ ಗಳಿಸಿದರು. ಆದರೆ ಕನ್ನಡ ಸಾಹಿತ್ಯ, ಸ್ವಾಮಿಯವರನ್ನು ನೆನೆಸುವುದು ಏಕೆಂದರೆ ಅವರು ತಮಗೆ ತಿಳಿದ ಸಸ್ಯ ವಿಜ್ಞಾನದ ತಿಳಿವನ್ನು ನಮ್ಮ ಕನ್ನಡ ಭಾಷೆಯಲ್ಲಿ ಅತ್ಯಂತ ಆಪ್ಯಾಯಮಾನವಾಗಿ ತಿಳಿಸಿಕೊಟ್ಟಿರುವರು ಎನ್ನುವ ಕಾರಣಕ್ಕೆ. ಸಂಗೀತ, ಚಿತ್ರಕಲೆ, ಶಾಸನ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಅಭಿರುಚಿ ಮಾತ್ರವಲ್ಲದೆ ಪರಿಶ್ರಮವಿದ್ದ ಸ್ವಾಮಿ ಅವರು ಅವೆಲ್ಲದರ ಪರಿಣತ ಫಲವನ್ನು ಕನ್ನಡದಲ್ಲಿ ದಾಖಲಿಸಿದ್ದಾರೆ. ಹಸುರು ಹೊನ್ನು, ನಮ್ಮ ಹೊಟ್ಟೆಯಲ್ಲೊಂದು ದಕ್ಷಿಣ ಅಮೆರಿಕಾ, ಸಾಕ್ಷಾತ್ಕಾರದ ದಾರಿಯಲ್ಲಿ, ಶಾಸನಗಳಲ್ಲಿ ಗಿಡಮರಗಳು, ಫಲಶ್ರುತಿ ಇವು ಸಸ್ಯ ಶಾಸ್ತ್ರೀಯ ಗ್ರಂಥಗಳಾದರೆ ತಮಿಳು ತಲೆಗಳ ನಡುವೆ, ಕಾಲೇಜು ರಂಗ, ಕಾಲೇಜು ತರಂಗ, ಪ್ರಾಧ್ಯಾಪಕನ ಪೀಠದಲ್ಲಿ, ಪಂಚಕಲಶ ಗೋಪುರ, ಅಮೆರಿಕೆಯಲ್ಲಿ ನಾನು ಅವರ ವಿಶಿಷ್ಟ ವಿಡಂಬನೆ ಮತ್ತು ಸಸ್ಯಶಾಸ್ತ್ರೀಯ ಸಂಬಂಧದ ಗ್ರಂಥಗಳು.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2018-2020**
**dt. 27-10-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-11-2018**

## ಹಸ್ತಪ್ರತಿ ವಿಭಾಗದ ಮತ್ತು ಗ್ರಂಥಾಲಯ ವಿಭಾಗದ ವರದಿ

ಗೋಖಲೆ ಸಾರ್ವಜನಿಕ ಸಂಸ್ಥೆಯಿಂದ ಗ್ರಂಥದಾನವಾಗಿ ಸ್ವೀಕರಿಸಿದ ಮೂರು ತಾಳೆಗರಿ ಗ್ರಂಥಗಳ ಶುಷ್ಕ ಶುದ್ಧೀಕರಣ ಪೂರ್ಣಗೊಂಡಿದ್ದು, ತೈಲ ಮತ್ತು ಮಸಿ ಲೇಪನ ಕಾರ್ಯಪ್ರಗತಿಯಲ್ಲಿದೆ.

ಜೂನ್-ಜುಲೈ ೨೦೧೮ರಲ್ಲಿ ಸಂರಕ್ಷಣೆ ಕೈಗೊಂಡ ೧೯ ತಿಗಳಾರಿ ತಾಳೆಗರಿ ಗ್ರಂಥಗಳನ್ನು ತಿಗಳಾರಿ ಲಿಪಿ ಕಲಿತಿರುವ ಶ್ರೀ ಮನೋಹರ ಹೆಗ್ಗಡೆಯವರು, ಸ್ವಆಸಕ್ತಿಯಿಂದ ಪ್ರತಿಷ್ಠಾನಕ್ಕೆ ಭೇಟಿನೀಡಿ, ಸೂಚಿ ತಯಾರಿಸಲು ಮುಂದಾಗಿದ್ದಾರೆ. ಅವರಿಗೆ ಪ್ರತಿಷ್ಠಾನವು ಬೇಕಾದ ಸೌಕರ್ಯವನ್ನು ನೀಡಿದೆ.

ಗ್ರಂಥಾಲಯದಲ್ಲಿ ಹೆಚ್ಚುವರಿ ಇರುವ ವಿದ್ವತ್ ನಿಯತಕಾಲಿಕೆಯನ್ನು ಗುರುತಿಸಿ, ಪ್ರತ್ಯೇಕವಾಗಿ ಇಡಲಾಗಿದೆ.ಆಸಕ್ತ ಕಾಲೇಜು, ವಿದ್ಯಾಸಂಸ್ಥೆಗಳು, ಗ್ರಂಥಪಾಲಕರನ್ನು ಬೇಟಿ ಮಾಡಿ ಮಾಹಿತಿ ಪಡೆಯಬಹುದು.

## ಪ್ರಕಟಣೆ

**ಕುವೆಂಪು ಅವರ ಜನ್ಮದಿನದಂದು ನಡೆಸಲಾಗುವ ಕಾರ್ಯಕ್ರಮದ ಅಂಗವಾಗಿ ೨೦೧೮ರ ಡಿಸೆಂಬರ್ ೨೪ರಂದು ಭಾನುವಾರ ೧೬ ರಿಂದ ೨೧ ವರ್ಷಗಳ ವಯೋಮಿತಿಯ ಯುವಜನತೆಗಾಗಿ ಕುವೆಂಪು ಅವರು ರಚಿಸಿರುವ ಕವಿತೆಗಳ ಗಾಯನ ಸ್ಪರ್ಧೆಯನ್ನು ಬಿ.ಎಂ.ಶ್ರೀ ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ನಡೆಸಲಾಗುವುದು. ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನಗಳನ್ನೂ ಪ್ರಶಸ್ತಿ ಪತ್ರಗಳನ್ನೂ ನೀಡಲಾಗುವುದು. ಸ್ಪರ್ಧೆಯು ಅಂದು ಬೆಳಗ್ಗೆ ೧೦-೩೦ ಗಂಟೆಗೆ ಆರಂಭವಾಗುತ್ತದೆ. ಅನಂತರ ಬಹುಮಾನ ವಿತರಣೆ ನಡೆಯುತ್ತದೆ. ಆಸಕ್ತರು ಹುಟ್ಟಿದ ತಾರೀಕಿನ ಬಗೆಗಿನ ದಾಖಲೆಯೊಡನೆ ದಿನಾಂಕ: ೨೦ ಡಿಸೆಂಬರ್ ೨೦೧೮ರ ಒಳಗೆ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಬಹುದು. ಪ್ರವೇಶ ಶುಲ್ಕವಿಲ್ಲ. ಹೆಚ್ಚಿನ ವಿವರಗಳಿಗೆ ಬಿ.ಎಂ.ಶ್ರೀ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಬಹುದು. ದೂರವಾಣಿ ಸಂಖ್ಯೆ- ೨೬೬೧೩೮೭೭/ ೨೬೬೭೬೭೭೩**

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ..........................................................................

..........................................................................

..........................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೩೮೭೭